# ಮಂಟೇಸ್ವಾಮಿ ಕಾವ್ಯದ ಸಾಂಸ್ಕೃತಿಕ ಅಧ್ಯಯನ

ಈ ನಿಂಬಧವನ್ನು ಕನ್ನಡ ವಿಶ್ವ ವಿದ್ಯಾನಿಲಯಕ್ಕೆ ಎಂ.ಫಿಲ್ (ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ.


ಸಂಶೋಧಕರು

ಮಹಾಲಿಂಗಯ್ಯ

ನೊಂದಣಿ ಸಂಖ್ಯೆ : ಕೆ.ಆರ್.ಎಸ್.ಎಂ.ಕೆ.ಎಸ್. 00554

ಮಾರ್ಗದರ್ಶಕರು

ಡಾ. ಪಿ. ಬೆಟ್ಟೇಗೌಡ



ಕರ್ನಾಟಕ ಸಂಘ (ರಿ.), ಮಂಡ್ಯ

ಎಂ.ಎಲ್. ಶ್ರೀಕಂಠೇಶಗೌಡ, ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ.ಯಿಂದ ಮಾನ್ಯತೆ ಪಡೆದಿದೆ)

ಮಂಡ್ಯ

2011–12

# ಮಂಟೇಸ್ವಾಮಿ ಕಾವ್ಯದ ಸಾಂಸ್ಕೃತಿಕ ಅಧ್ಯಯನ

ಈ ನಿಂಬಧವನ್ನು ಕನ್ನಡ ವಿಶ್ವ ವಿದ್ಯಾನಿಲಯಕ್ಕೆ ಎಂ.ಫಿಲ್ (ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ.

ಸಂಶೋಧಕರು
ಮಹಾಲಿಂಗಯ್ಯ
ನೊಂದಣಿ ಸಂಖ್ಯೆ : ಕೆ.ಆರ್.ಎಸ್.ಎಂ.ಕೆ.ಎಸ್. 00554

ಮಾರ್ಗದರ್ಶಕರು
ಡಾ. ಪಿ. ಬೆಟ್ಟೇಗೌಡ

ಕರ್ನಾಟಕ ಸಂಘ (ರಿ.), ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ, ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ.ಯಿಂದ ಮಾನ್ಯತೆ ಪಡೆದಿದೆ)
ಮಂಡ್ಯ

2011–12

974

# ಮಾರ್ಗದರ್ಶಕರ ದೃಢೀಕರಣ ಪತ್ರ

**"ಮಂಟೇಸ್ವಾಮಿ ಕಾವ್ಯದ ಸಾಂಸ್ಕೃತಿಕ ಅಧ್ಯಯನ"** ಎಂಬ ವಿಷಯದ ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ (ಕನ್ನಡ) ಪದವಿಗಾಗಿ **ಶ್ರೀ. ಮಹಾಲಿಂಗಯ್ಯ.** ಅವರು ನನ್ನ ಮಾರ್ಗದರ್ಶನ ಹಾಗೂ ಮೇಲ್ವಿಚಾರಣೆಯಲ್ಲಿ ಬರೆದು ಒಪ್ಪಿಸುತ್ತಿದ್ದಾರೆಂದು ಹಾಗೂ ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರ ಸಹಿ**

ಸ್ಥಳ: ಮಂಡ್ಯ.
ದಿನಾಂಕ: 20-06-2012

**(ಡಾ. ಪಿ. ಬೆಟ್ಟೇಗೌಡ)**
ಕನ್ನಡ ಸಹ ಪ್ರಾಧ್ಯಾಪಕರು,
ಸರ್ಕಾರಿ ಮಹಿಳಾ ಕಾಲೇಜು,
ವಿಜಯನಗರ, ಮೈಸೂರು.

# ಸಂಶೋಧಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀ ಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2011-12ರ ಸಾಲಿಗೆ ಕನ್ನಡ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಮಂಟೇಸ್ವಾಮಿ ಕಾವ್ಯದ ಸಾಂಸ್ಕೃತಿಕ ಅಧ್ಯಯನ"** ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ. ಪಿ. ಬೆಟ್ಟೇಗೌಡರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಯಾವುದೇ ಅಧ್ಯಾಯವನ್ನಾಗಲಿ ಗ್ರಂಥ ಅಥವಾ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ. ಮತ್ತು ಕನ್ನಡ ವಿಶ್ವವಿದ್ಯಾಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

(ಮಹಾಲಿಂಗಯ್ಯ)
ಸಂಶೋಧಕರು,
ಕನ್ನಡ ವಿಭಾಗ,
ಕರ್ನಾಟಕ ಸಂಘ (ರಿ.), ಮಂಡ್ಯ,
ಎಂ.ಎಲ್. ಶ್ರೀಕಂಠೇಶಗೌಡ ಸಂಶೋದನಾ ಕೇಂದ್ರ.
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

ಸ್ಥಳ : ಮಂಡ್ಯ.
ದಿನಾಂಕ : ೨೦-೦೬-೨೦೧೨.

# ಪರಿವಿಡಿ

**ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ** **ಪುಟ ಸಂಖ್ಯೆ**

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಮಂಟೇಸ್ವಾಮಿ ಜನಪದ ಕಾವ್ಯವು ಕನ್ನಡದಲ್ಲಿ ಕಂಡು ಬರುವ ಅತ್ಯುತ್ತಮ ಜನಪದ ಕಾವ್ಯಗಳಲ್ಲಿ ಒಂದು. ಇದು ಭಾಷಿಕ ಮತ್ತು ಕಥೆ ಈ ಎರಡರ ನೆಲೆಯಲ್ಲೂ ಭಿನ್ನವಾಗಿದ್ದು ಅನಕ್ಷರಸ್ಥ ಪರಂಪರೆ ಕಟ್ಟಿದ ಮಹಾಕಾವ್ಯವಾಗಿದೆ.

ಮಂಟೇಸ್ವಾಮಿ ಮಲೆ ಮಹದೇಶ್ವರ ಮೊದಲಾದ ಜನಪದದ ಈ ಬಗೆಯ ಕಾವ್ಯಗಳನ್ನು ಅಕ್ಷರಸ್ಥರು ಬಹಳ ಕಾಲದವರೆಗೆ ನಿರ್ಲಕ್ಷಿಸಿದರು. ಇತ್ತೀಚೆಗೆ ಸಂಶೋಧಕರ ಧೋರಣೆಗಳು ಬದಲಾಗಿ ಇಂತಹ ಕಾವ್ಯಗಳನ್ನು ಅಧ್ಯಯನಕ್ಕೆ ಒಳಪಡಿಸುತ್ತಿರುವುದು ಆಶಾದಾಯಕವಾಗಿದೆ. ಈ ಕಾವ್ಯಗಳು ಒಳಗೊಂಡಿರುವ ಜೀವನ ದರ್ಶನ, ಮೌಲ್ಯ ಸಾಂಸ್ಕೃತಿಕ ಮಹತ್ವ ಮೊದಲಾದವುಗಳನ್ನು ಅಧ್ಯಯನ ಮಾಡುವ ಉದ್ದೇಶವಾಗಿದೆ. ಎಷ್ಟೋ ಸಂದರ್ಭಗಳಲ್ಲಿ ಶ್ರೇಷ್ಠ ಕಾವ್ಯಗಳಿಗಿಂತ ಜನಪದ ಕಾವ್ಯಗಳೇ ಮಹತ್ವವು ಗಂಭೀರವು ಆಗಿದೆ ಮತ್ತು ಜೀವನ ದರ್ಶನಗಳನ್ನು ನೀಡುತ್ತವೆ.

ಹನ್ನೆರಡನೇ ಶತಮಾನದ ಶರಣರ ಚಳುವಳಿ ಅಲ್ಲಿ ನಡೆದ ವರ್ಣ ಸಂಘರ್ಷ ಆ ಮೂಲಕ ಆಶಿಸಲಾಗಿದ್ದ ಕೆಳ ಜಾತಿಗಳ ಒಗ್ಗಟ್ಟು ಅನೇಕ ವಿಪ್ಲವಗಳ ಕಾರಣ ವಿಫಲವಾದ ನಂತರ ಕರ್ನಾಟಕ ಸಾಂಸ್ಕೃತಿಕ ಇತಿಹಾಸದಲ್ಲಿ ಪ್ರಕ್ಷುಬ್ಧ ವಾತಾವರಣವೇ ತಲೆದೋರಿತು. ಶರಣರ ಜನಪದ ಚಳುವಳಿಯ ಮೂಲಕ ಚರಿತ್ರೆಯಲ್ಲಿಯೇ ಮೊದಲ ಬಾರಿಗೆ ಬೀದಿಗೆ ಬಂದ ಕೆಳವರ್ಗದ ಜನ ನಂತರ ಅನಿರೀಕ್ಷಿತ ಸೋಲಿನಿಂದಾಗಿ ಹತಾಶರಾಗಿ ತಮ್ಮ ತಮ್ಮ ದಾರಿಗಳನ್ನು ತಾವು ಹಿಡಿದಂತೆ ಕಾಣುತ್ತದೆ. ಆದುದರಿಂದ ಮಂಟೇಸ್ವಾಮಿ ಮತ್ತು ಮಾದೇಶ್ವರರ ಜನಪದ ಕಾವ್ಯವನ್ನು ನಾವು ಈ ಹಿನ್ನೆಲೆಯಾಗಿ ನೋಡಬೇಕಾಗಿದೆ.

ಮಂಟೇಸ್ವಾಮಿ ಮತ್ತು ಮಾದೇಶ್ವರರು ಚಳುವಳಿಯ ಒಂದು ಭಾಗವಾಗಿದ್ದರು ಎಂಬುದಕ್ಕೆ ಯಾವುದೇ ಆಧಾರ ಸಿಗುವುದಿಲ್ಲ. ಮತ್ತು ಮಂಟೇಸ್ವಾಮಿ ಮತ್ತು ಮಾದೇಶ್ವರರು ಕೆಳವರ್ಗಕ್ಕೆ ಸೇರಿದವರು ಎಂಬುದಕ್ಕೆ ಯಾವುದೇ ಅನುಮಾನವು ಇರುವುದಿಲ್ಲ ಈಗಲೂ ಅಸ್ತಿತ್ವದಲ್ಲಿರುವ ಈ ಪಂಥಗಳ ಗುಡ್ಡರ ಸಂಪ್ರದಾಯಗಳು ಹಾಗೂ ಆಚರಣೆಗಳು ಈ ವಾದಕ್ಕೆ ಪುಷ್ಠಿ ನೀಡುವ ಉದ್ದೇಶವನ್ನು ಹೊಂದಿರುತ್ತದೆ.

ಈ ಹಿಂದೆ ಇದ್ದ ಸಂಸ್ಕೃತಿಗೆ ಪ್ರತಿಯಾಗಿ ಮತ್ತೊಂದು ಸಂಸ್ಕೃತಿಯನ್ನು ಕಟ್ಟಿಕೊಟ್ಟವರು ಸಿದ್ಧಪ್ಪಾಜಿ, ಮಂಟೇಸ್ವಾಮಿ, ಜುಂಜಪ್ಪ. ಇವರ ಹೋರಾಟದ ಬದುಕೇ ಒಂದು ಮಹಾಕಾವ್ಯವಾಗಿ ಹಾಡಲ್ಪಟ್ಟಿದೆ. ಶಿಷ್ಟ ಕಾವ್ಯಕ್ಕಿಂತ ಜನಪದ ಮಹಾಕಾವ್ಯಗಳಲ್ಲಿ ಬದುಕನ್ನು ನೋಡುವ ಪ್ರಮಾಣಿಕತೆಯನ್ನು ಗ್ರಹಿಸುವ ಅಂಶಗಳಿವೆ. ರಾಮಾಯಣ, ಮಹಾಭಾರತಗಳಂತೆ ಕಾಲ್ಪನಿಕ ಪಾತ್ರಗಳು ಇವಲ್ಲ ಜನಪದ ಸಾಹಿತ್ಯ ನೇರವಾಗಿ

ಮನುಷ್ಯನ ನೈಜ ಬದುಕಿಗೆ ಸಂಬಂದಿಸಿದ್ದಾಗಿದೆ. ಆದುದರಿಂದ ಈ ಕಾವ್ಯವನ್ನು ಅಧ್ಯಯನ ಮಾಡಲು ತೆಗೆದುಕೊಂಡಿರುತ್ತೇನೆ.

ಶಿಷ್ಟ ಕಾವ್ಯವನ್ನು ಕುರಿತು ಹಾಗೆ ನಡೆದಷ್ಟು ಅಧ್ಯಯನ ಜನಪದ ಕಾವ್ಯವನ್ನು ಕುರಿತು ನಡೆಯಲಿಲ್ಲ. ಈ ದೃಷ್ಟಿಯಿಂದ ಮಂಟೇಸ್ವಾಮಿ ಕಾವ್ಯವನ್ನು ಸಾಂಸ್ಕೃತಿಕ ಅಧ್ಯಯನ ವ್ಯಾಪ್ತಿಗೆ ಒಳಪಡಿಸಲು ಈ ಕಾವ್ಯವನ್ನು ಒಳಪಡಿಸುತ್ತೇನೆ.

ಮಂಟೇಸ್ವಾಮಿ ಕಾವ್ಯವು ಶಿಷ್ಟ ಸಾಹಿತ್ಯದಂತೆ ಜನಪದ ಸಾಹಿತ್ಯದಲ್ಲಿ ಸಹ ಭಾಷಿಕ ನೆಲೆ. ಕಥನ, ನೆಲೆ ಪಾತ್ರ ಸೃಷ್ಟಿಯ ನೆಲೆಯಿಂದ ನೋಡಬಹುದಾಗಿದೆ. ಆದುದರಿಂದ ನನ್ನ ಸಂಶೋಧನೆ ಸಾಂಸ್ಕೃತಿಕವಾಗಿ ಮಾತ್ರ ಅಧ್ಯಯನ ಮಾಡಲು ತೆಗೆದುಕೊಂಡಿರುತ್ತೇನೆ.

ಇತ್ತೀಚಿನ ದಿನಗಳಲ್ಲಿ ಹಲವಾರು ಕವಿಗಳ ಬಗ್ಗೆ ಸಂಶೋಧನೆಗಳು ಸಾಕಷ್ಟು ನಡೆದು ಹೋಗಿವೆ. ಆದರೆ ಜನಪದ ಕಾವ್ಯಗಳಾದ ಮಂಟೇಸ್ವಾಮಿ, ಮಹದೇಶ್ವರನ ಕಾವ್ಯಗಳ ಬಗ್ಗೆ ಅಷ್ಟೇನು ಸಂಶೋಧನೆಯ ಕೃಷಿ ಆಗಿಲ್ಲ. ಆದುದರಿಂದ ಈ ಕಾವ್ಯವನ್ನು ಅಧ್ಯಯನ ಮಾಡಲು ಇಚ್ಚಿಸಿದ್ದೇನೆ. ಹಾಗೆಯೇ ಪಂಪನನ್ನು ಶ್ರೇಷ್ಟ ಕವಿ ಎಂದೂ ಕರೆಯುತ್ತಾರೆ. ಹಾಗೆಯೇ ಅವನು ಬರೆದ ಕೃತಿಗಳನ್ನು ಶ್ರೇಷ್ಟ ಕಾವ್ಯಗಳೆಂದು ಮನ್ನಣೆ ಕೊಟ್ಟು ಜನಪ್ರಿಯಗೊಳಿಸಿದ್ದಾರೆ. ಆದರೆ ಜನಪದ ಕಾವ್ಯಗಳಾದ ಮಂಟೇಸ್ವಾಮಿ, ಮಾದೇಶ್ವರನ ಕಾವ್ಯಗಳನ್ನು ಯಾರೂ ಕೂಡ ಗಂಭೀರವಾಗಿ ಅಧ್ಯಯನ ಮಾಡಲು ಹೋಗಿಲ್ಲ ಆದುದರಿಂದ ಈ ಕಾವ್ಯವನ್ನು ಅಧ್ಯಯನ ಮಾಡಲು ಸಂಶೋಧನೆಗೆ ಅಳವಡಿಸಿಕೊಂಡಿದ್ದೇನೆ. ಮಂಟೇಸ್ವಾಮಿ ಕಾವ್ಯಗಳಲ್ಲಿ ಜನರ ಬದುಕು ನಿರಂತರವಾಗಿದೆ ಎಂಬುದನ್ನು ನಾವು ಕಾಣಬಹುದಾಗಿದೆ. ಮಂಟೇಸ್ವಾಮಿ ಕಾವ್ಯವನ್ನು ನಾವು ಸಾಂಸ್ಕೃತಿಕ ರೀತಿಯಿಂದ ನೋಡಬಹುದಾಗಿದೆ.

ಆದುದರಿಂದ ನಾವು ಈ ಕಾವ್ಯದ ಸಂಸ್ಕೃತಿಯನ್ನು ಪರ್ಯಾಯ ಸಂಸ್ಕೃತಿಯಾಗಿ ನಾವು ನೋಡಬಹುದಾಗಿದೆ. ಮಂಟೇಸ್ವಾಮಿ ಹುಟ್ಟಿನಿಂದ ಯಾವುದೇ ಜಾತಿಯವರಾಗಲಿ ಕೆಳವರ್ಗಗಳ ವೀರ ಪುರುಷರಾಗಿ ಆರಾಧಿಸಲ್ಪಟ್ಟಿದ್ದು ಮಾತ್ರ ನಿಜ. ಆ ಅರಣ್ಯದಲ್ಲಿ ಬೈರಾಗಿಗಳು ಕೇವಲ ಹೊಟ್ಟೆ ಹೊರೆಯುವ ಸಂನ್ಯಾಸಿಗಳಾಗಿರಲಿಲ್ಲ. ಪಟ್ಟಭದ್ರ ಸಂಸ್ಕೃತಿಗೆ ವಿರುದ್ಧವಾದ ಕೆಳವರ್ಗಗಳ ಅಸ್ತಿತ್ವವನ್ನು ಪುನರ್ ಸ್ಥಾಪಿಸುವ ಪ್ರತಿ ಸಂಸ್ಕೃತಿಯೆಂದರ ನಿರ್ಮಾಣ ಇರುವ ಉದ್ದೇಶವನ್ನು ಹೊಂದಿದಂತೆ ತೋರುತ್ತದೆ. ಈ ಕಾರಣಕ್ಕಾಗಿಯೇ ನಾನು ಈ ಕಾವ್ಯವನ್ನು ಸಂಶೋಧನೆಗೆ ಒಳಪಡಿಸಿಕೊಂಡಿದ್ದೇನೆ. ಹಾಗೆಯೇ ಮಂಟೇಸ್ವಾಮಿ ಮತ್ತು ಮಾದೇಶ್ವರರು ಈ ಇಬ್ಬರೂ ಆರಿಸಿಕೊಂಡಿದ್ದು ಬುಡಕಟ್ಟುಗಳು ಮತ್ತು ಶೂದ್ರಾತಿ ಶೂದ್ರರೇ ಅಧಿಕವಾಗಿದ್ದ ಕರ್ನಾಟಕದ ದಕ್ಷಿಣದ ತುದಿಯನ್ನು ದಕ್ಷಿಣದ ಹಲವು ಭಾಗಗಳಲ್ಲಿ ಇವರ ಗುರುಪೀಠ ಮತ್ತು ಗದ್ದುಗೆಗಳು ಇದ್ದವು. ಇವರ ಬಗ್ಗೆ ತಿಳಿದುಕೊಳ್ಳಲು ಈ ಕಾವ್ಯದ ಸಂಶೋಧನೆಯ ಉದ್ದೇಶವಾಗಿದೆ

ಮಾದೇಶ್ವರ ಮತ್ತು ಮಂಟೇಸ್ವಾಮಿ ಇವರಿಬ್ಬರೂ ಒಟ್ಟೊಟ್ಟಿಗೆ ನೋಡುತ್ತಾ ಬಂದಿದ್ದೇವೆ. ಆಗಾದರೆ ಇವರಿಬ್ಬರೂ ಸಮಕಾಲೀನರೆ? ಇವರಿಬ್ಬರ ಗುರಿ ಒಂದೇ ಆಗಿತ್ತೆ? ಎಂಬ ಸಂಶಯಗಳು ಹುಟ್ಟಿಕೊಳ್ಳುತ್ತವೆ. ಆದುದರಿಂದ ಇವರ ಬಗ್ಗೆ ತಿಳಿದುಕೊಳ್ಳಲು ಈ ಜನಪದ ಕಾವ್ಯಗಳು ನಮಗೆ ಸಹಾಯ ಮಾಡುತ್ತವೆ.

ಮಾದೇಶ್ವರನ ಗುಡ್ಡರಾದ ಕಂಸಾಳೆ ಗಾಯಕರಿಗೂ ಮಂಟೇಸ್ವಾಮಿ ಗುಡ್ಡರಾದ ನೀಲಗಾರರಿಗೂ ಅನೇಕ ವ್ಯತ್ಯಾಸಗಳಿವೆ. ಅದರ ಬಗ್ಗೆ ಮತ್ತು ಅವರಿಬ್ಬರ ಪ್ರತಿ ಸಂಸ್ಕೃತಿಯ ಬಗ್ಗೆ ತಿಳಿದುಕೊಳ್ಳುವ ಉದ್ದೇಶ ನಮ್ಮದಾಗಿದೆ. ಹಾಗೆಯೇ ಅಂದಿನ ದಟ್ಟಾರಣ್ಯದ ಹಲವು ಬುಡಕಟ್ಟುಗಳ ನಡುವೆ ಆರಂಭವಾದ ಈ ಸಾಂಸ್ಕೃತಿಕ ಮಂಥನ, ದೀರ್ಘ ಕಥನಗಳಾಗಿ ರೂಪುಗೊಂಡಿದ್ದು ಮಾತ್ರ ಕುತೂಲಹಕಾರಿಯಾಗಿದೆ. ಈ ದೃಷ್ಟಿಯಿಂದ ನಾವು ಈ ಮಂಟೇಸ್ವಾಮಿ ಕಾವ್ಯವನ್ನ ನೋಡಬಹುದಾಗಿದೆ.

ಮಂಟೇಸ್ವಾಮಿಯವರನ್ನು ಧರೆಗೆ ದೊಡ್ಡವರು ಎಂದೂ ಕರೆಯುತ್ತಾರೆ. ಮತ್ತು ಇಂತವರು ತ್ರಿಮೂರ್ತಿಗಳ ವರದಿಂದಲೋ ಇಲ್ಲ ಅವರ ಶಾಪದಿಂದಲೋ ಇಲ್ಲವೇ ಅವರ ಬೆವರಿನಿಂದಲೋ ಹುಟ್ಟುವುದು ಸಾಂಪ್ರದಾಯಿಕ ಪುರಾಣಗಳ ವಾಡಿಕೆ. ಆದುದರಿಂದ ಇದರ ಬಗ್ಗೆ ಸಂಶೋಧನೆ ಮಾಡುವ ಉದ್ದೇಶ ಇದರದ್ದಾಗಿದೆ.

ಮಂಟೇಸ್ವಾಮಿಯು ಸಾಮಾಜಿಕವಾಗಿ ಎದುರು ನಿಂತಿರುವ ಬಂದು ಪ್ರತಿಷ್ಠಿತ ಧರ್ಮವನ್ನು ಎದುರು ಹಾಕಿಕೊಳ್ಳಲು ಸಾಧ್ಯವಾಗದಾದಾಗ ತಮ್ಮ ಸಾಂಸ್ಕೃತಿಕ ನಾಯಕನೊಬ್ಬನನ್ನು ಅತಿ ಮಾನುಷನನ್ನಾಗಿ ಸೃಷ್ಟಿಸಿ ಬಸವಣ್ಣನಿಗಿಂತ ಶಿವನಿಗಿಂತ ಅಥವಾ ಸೂರ್ಯ, ಚಂದ್ರರಿಗಿಂತ ದೊಡ್ಡವನೆಂದು ಕರೆದುಕೊಳ್ಳುವ ಸಮಾಧಾನಕರ ಆಶಯ ಇಲ್ಲಿರುವಂತಿದೆ. ಆದುದರಿಂದ ಅವನು ಬ್ರಹ್ಮಾಂಡವನ್ನೇ ಸೃಷ್ಟಿಸಬಲ್ಲ ಮಾಯಕಾರನಾಗಿ ಅವನ ಭಕ್ತರಿಗೆ ತೋಚುತ್ತಾನೆ.

ಮಂಟೇಸ್ವಾಮಿಗೂ ಶರಣರ ಚಳುವಳಿಯ ಅಲ್ಲಮ ಪ್ರಭುವಿಗೂ ಕಾವ್ಯದಲ್ಲಿ ಅವಿನಾಭಾವ ಸಂಬಂಧವಿದೆ. ಆದುದರಿಂದ ಇವರ ಬಗ್ಗೆ ಸಂಶೋಧನೆ ಮಾಡುವ ಉದ್ದೇಶ ನಮ್ಮದಾಗಿದೆ. ಅಲ್ಲಮ್ಮ ಪ್ರಭು ಪರಂಜ್ಯೋತಿ – ಜಗಂಜ್ಯೋತಿ ಎಂಬಂತ ಪದಗಳು ಪುನಾರವರ್ತಿತವಾಗಿರುತ್ತವೆ. ಅಲ್ಲಮಪ್ರಭು ಅಂದಿನ ಶರಣರ ಗುಂಪಿನಲ್ಲಿದ್ದು ತನ್ನದೇ ಆದ ವಿಶೇಷತೆಯನ್ನು ಹೊಂದಿದ್ದ ನಿಷ್ಠುರವಾದಿ ಕಟ್ಟಿದ ಲಿಂಗಕ್ಕಿಂತ ಆತ್ಮಲಿಂಗಕ್ಕೆ ಒತ್ತುಕೊಟ್ಟವರು. ಇಲ್ಲಿ ಮಂಟೇಸ್ವಾಮಿಯ ತತ್ವವೂ ಕೂಡ ಅಡಗಿದೆ. ಅವನು ಜ್ಯೋತಿರ್ಲಿಂಗಯ್ಯ ಹಾಗೇ ನೋಡಿದರೆ ಶೈವ ಸಂಸ್ಕೃತಿಯಲ್ಲಿ ಅಂತರ್ಗತವಾಗಿರುವ ಒಂದು ಚರ್ಚೆ ವಾಗ್ವಾದ ಇಲ್ಲಿ ಅಡಗಿದೆ. ಇಂತಹ ಕಲ್ಪನೆಗಳನ್ನು ತಿಳಿದುಕೊಳ್ಳಲು ಮಂಟೇಸ್ವಾಮಿಯ ಕಾವ್ಯವನ್ನು ಒಳಪಡಿಸುತ್ತೇವೆ.

ನಾವು ಮಂಟೇಸ್ವಾಮಿ ಕಾವ್ಯದಲ್ಲಿ ಶಿಶು ಮಕ್ಕಳನ್ನು ಪಡೆಯುವುದು ಇಲ್ಲಿ ಸಾಂಕೇತಿಕ. ಅವರ ಮೂಲಕ ಒಂದೊಂದು ಜನವರ್ಗವೇ ಮಂಟೇಸ್ವಾಮಿಯ [illegible] ಪರಿಧಿಯ ಒಳಕ್ಕೆ ಸೇರಿಬಿಡುತ್ತಾರೆ. ಆದುದರಿಂದ ನಾವು ಈ ಕಾವ್ಯದಲ್ಲಿ,

ಗುಂಟಿಪ್ಪಾಜಿ, ತೋಪಿನ ದೊಡ್ಡಮ್ಮ, ಚೆನ್ನಾಜಮ್ಮ, ಮಡಿವಾಳ ಮಾಚಯ್ಯ, ಫಲಾದರಯ್ಯ, ಸಿದ್ದಪ್ಪಾಜಿ. ಇವರೆಲ್ಲ ಮಂಟೇಸ್ವಾಮಿ ಪಂಥದ ಪ್ರಮುಖ ಅನುಯಾಯಿಗಳು, ಇವರನ್ನು ಶಿಶುಮಕ್ಕಳಾಗಿ ಪಡೆಯುವುದೇ ಒಂದೊಂದು ಕಥನವಾಗಿ ರೂಪುಗೊಳ್ಳುತ್ತಾರೆ. ಆದುದರಿಂದ ನಾವು ಇದರ ಬಗ್ಗ ಅಧ್ಯಯನ ಮಾಡುವ ಉದ್ದೇಶವಾಗಿದೆ. ಇಲ್ಲಿ ಮಂಟೇಸ್ವಾಮಿ ಮಾಡುವ ಮೋಡಿ, ಮಾಟ, ತಂತ್ರ, ಮಾಯಕಾರ ವಿದ್ಯೆಗಳು ಇಲ್ಲಿ ಸರಾಗವಾಗಿ ಬಂದು ಹೋಗುತ್ತವೆ. ಮಂಟೇಸ್ವಾಮಿ ಕಾವ್ಯದ ಬಹಳ ಮುಖ್ಯ ಅಂಶವೇನೆಂದರೆ ಎಲ್ಲಿಯೂ ಈ ಕಥೆಯೊಳಗೆ ಹಿಂಸೆಯ ರೂಪವನ್ನ ನಾವು ನೋಡಲು ಆಗುವುದಿಲ್ಲ.

ಆದರೆ ಮಂಟೇಸ್ವಾಮಿ ಅಹಂಕಾರಿಗಳನ್ನು ಬಿಡುವವನಲ್ಲ. ಅವರು ಎಷ್ಟೇ ದೊಡ್ಡವರಾದರು ಅಂಥವರ ಅಸ್ತಿತ್ವವನ್ನೇ ಪಲ್ಲಟಗೊಳಿಸಬಲ್ಲ ಶಕ್ತಿ ಅವನಿಗಿದೆ. ಎಂಥದ್ದನ್ನು ಅಧೀನ ಮಾಡಿಕೊಳ್ಳಬಲ್ಲ ಚಾತುರ್ಯವಿದೆ. ಇಂತಹ ಇಷ್ಟಕ್ಕೂ ಬಂದಾಗಲೆಲ್ಲ ಮಾದೇಶ್ವರ ಒಬ್ಬ ಸಾಂಕೇತಿಕ ನಾಯಕನಾಗಿ ಕಂಡರೆ ಮಂಟೇಸ್ವಾಮಿ ಒಬ್ಬ ಆಧ್ಯಾತ್ಮಿಕ ನೇತಾರನಾಗಿ ಕಾಣಿಸಿಕೊಳ್ಳುತ್ತಾನೆ. ಸಾಮಾನ್ಯವಾಗಿಯೇ ಎಲ್ಲವನ್ನೂ ಅಧೀನಕ್ಕೆ ತೆಗೆದುಕೊಳ್ಳುತ್ತಾನೆ. ಯಾವುದಾದರು ಸಾಧ್ಯವಾಗದಿದ್ದಾಗ ಅವನು ಮೌನಿಯಾಗುತ್ತಾನೆ. ಆದುದರಿಂದ ಇಂತಹ ಕಾವ್ಯಗಳನ್ನು ನೋಡುವಾಗ ನಾವು ಸಾಂಸ್ಕೃತಿಕ ದೃಷ್ಟಿಯಿಂದ ನೋಡಬೇಕಾಗುತ್ತದೆ.

ಇಲ್ಲಿ ಮಂಟೇಸ್ವಾಮಿ ಖಂಡುಗ ಗಟ್ಟಲೆ ಭಂಗಿಯನ್ನು ಇಲ್ಲವಾಗಿಸಿ ವಾಲುತ್ತ – ಜೋಲುತ್ತ ಇರುವಾಗ ಅತನಿಗೆ ಪರಿಹಾರಗಳು ಹೊಳೆಯುತ್ತವೆ, ಜ್ಞಾನೋದಯ ವಾಗುತ್ತದೆ. ಇದನ್ನ ನಾವು ಈ ಕಾವ್ಯದಲ್ಲಿ ನೊಡಬೇಕಾಗುತ್ತದೆ.

ಒಟ್ಟಾರೆ ಮಂಟೇಸ್ವಾಮಿಯ ಕಾವ್ಯದ ಉದ್ದೇಶವೇನೆಂದರೆ ಈ ಕಾವ್ಯದ ಸಂಸ್ಕೃತಿಯ ಚಿಂತನೆಗಳು ಪರ್ಯಾಯ ಸಂಸ್ಕೃತಿ, ಕಥೆಯಲ್ಲಿ ಬರುವ ಪಾತ್ರಗಳು ಮತ್ತು ಅದರ ಮೌಲ್ಯ, ಅಲ್ಲಿ ತೆಗೆದುಕೊಂಡ ನಿರ್ಣಯ ಮತ್ತು ಕಾವ್ಯಗಳಲ್ಲಿ ಬರುವ ವಿಚಾರಗಳ ದೃಷ್ಟಿಕೋನದಿಂದ ಅಧ್ಯಯನ ಮಾಡುತ್ತಿದ್ದೇವೆ. ಮತ್ತು ಜನಪದ ಕಾವ್ಯಗಳಲ್ಲಿ ಬರುವ ಜನರ ಬದುಕಿನ ಚಿತ್ರಣ. ಆ ಜನರ ಸಂಸ್ಕೃತಿಯು ಹೇಗೆ ಅಳವಡಿಕೆಯಾಗಿದೆ ಮತ್ತು ಆ ಕಾವ್ಯದಲ್ಲಿ ಅದರ ಮಾನದಂಡವನ್ನು ಹೇಗೆ ಬಳಸಿಕೊಳ್ಳಲಾಗಿದೆ. ಸಂಸ್ಕೃತಿ ಮತ್ತು ಪರ್ಯಾಯ ಸಂಸ್ಕೃತಿಯ ಬಗ್ಗೆ ತಿಳಿದುಕೊಳ್ಳುವುದೇ ಈ ಮಂಟೇಸ್ವಾಮಿ ಕಾವ್ಯದ ಉದ್ದೇಶವಾಗಿದೆ.

ಮಂಟೇಸ್ವಾಮಿ ಕಾವ್ಯದಲ್ಲಿ ಮಂಟೇಸ್ವಾಮಿಯು ತನ್ನ ಶಿಷ್ಯರನ್ನು ಪಡೆದುಕೊಂಡು ಅವರಿಂದ ಶ್ರೀಮಂತ ವರ್ಗದ ಜನರಿಗೆ ಶಿಕ್ಷೆಯನ್ನು ಪವಾಡಗಳ ಮೂಲಕ ಮಾಡಿಸುತ್ತಾ ಬಡವರಿಗೆ, ಒಳ್ಳೆಯದನ್ನ ಮಾಡುತ್ತಾ ಹೋಗುತ್ತಾನೆ. ಆದುದರಿಂದ ಈ ಹಿನ್ನೆಲೆಯಲ್ಲಿ ನಾವು ಮಂಟೇಸ್ವಾಮಿಯ ಕಾವ್ಯವನ್ನು ಅಧ್ಯಯನ ಮಾಡುವ ಉದ್ದೇಶವನ್ನು ಕಂಡುಕೊಂಡಿದ್ದೇವೆ.

ಮಂಟೇಸ್ವಾಮಿ ಜನಪದ ಕಾವ್ಯವು ತುಂಬಾ ಆಳವಾಗಿರುವುದರಿಂದ ಹೆಚ್ಚಿನ [illegible] ಈ ಕಾವ್ಯದ ಉದ್ದೇಶವಾಗಿದೆ

## ಅಧ್ಯಾಯ – ೧

**ಅಧ್ಯಯನದ ಸಂಸ್ಕೃತಿಯ ಪರಿಕಲ್ಪನೆ:-**

ಕನ್ನಡದ ಇತ್ತೀಚಿನ ಬೌದ್ಧಿಕ ಚರ್ಚೆಗಳಲ್ಲಿ ಹೆಚ್ಚಾಗಿ ಬಳಕೆಯಾಗುತ್ತಿರುವ ಶಬ್ಧಗಳಲ್ಲಿ ಸಂಸ್ಕೃತಿ ಎಂಬುದು ಒಂದು.

ನಮ್ಮ ವಿಶ್ವವಿದ್ಯಾಲಯಗಳ ಸಮಾಜ ವಿಜ್ಞಾನ ಹಾಗು ಮಾನವಿಕಕ್ಕೆ ಸೇರಿದ ಬಹುತೇಕ ಕ್ಷೇತ್ರಗಳಲ್ಲಿ "ಸಾಂಸ್ಕೃತಿಕ ಅಧ್ಯಯನ" ಎಂಬ ಹೆಸರಲ್ಲಿ ಅಧ್ಯಯನಗಳು ನಡೆಯುತ್ತವೆ. ಸಾಂಸ್ಕೃತಿಕ ವಿಶೇಷಣಾದೊಂದಿಗೆ ಅಧ್ಯಯನ ಮಾಡುವುದು ಈಗ ಒಂದು ಬಗೆಯಲ್ಲಿ ಜನಪ್ರಿಯ ವಿಧಾನವು ಆಗಿದೆ. ಇದರ ಜೊತೆಗೆ ಹಿಂದೂ ಸಂಸ್ಕೃತಿ, ಇಸ್ಲಾಂ ಸಂಸ್ಕೃತಿ, ಭಾರತೀಯ ಸಂಸ್ಕೃತಿ, ಕನ್ನಡ ಸಂಸ್ಕೃತಿ, ಕರ್ನಾಟಕ ಸಂಸ್ಕೃತಿ, ಪ್ರತಿ ಸಂಸ್ಕೃತಿ, ಪರ್ಯಾಯ ಸಂಸ್ಕೃತಿ, ಉಪ ಸಂಸ್ಕೃತಿ, ಯಜಮಾನ ಸಂಸ್ಕೃತಿ ಹೀಗೆ ಬೇರೆ ಬೇರೆ ವಿಷಯ ಮತ್ತು ಥೀಮುಗಳಿಗೆ ಸಂಸ್ಕೃತಿ ಎಂಬ ಶಬ್ದ ಹಚ್ಚಿ ಹೊಸ ಹೊಸ ಪರಿಕಲ್ಪನೆಗಳು ಸೃಷ್ಟಿಯಾಗಿವೆ.

ಇಷ್ಟೆಲ್ಲ ವ್ಯಾಪಕ ಬಳಕೆ ಮತ್ತು ಪರಿಣಾಮಕ್ಕೆ ಒಳಗಾಗಿರುವ ಈ ಸಂಸ್ಕೃತಿ ಎಂಬ ಪರಿಕಲ್ಪನೆ ಮತ್ತು ಶಬ್ಧದ ಅರ್ಥವೇನು ಎಂಬುದನ್ನು ನಾವು ಪರಿಶೀಲಿಸುವ ಅಗತ್ಯವಿದೆ.

ಆದ್ದರಿಂದ ಸಂಸ್ಕೃತಿ ಎಂಬುದು ಒಂದು ಸಂಗತಿ ಮೂರ್ತವಾಗಿ ಖಚಿತವಾಗಿ ವಾಸ್ತವದಲ್ಲಿ ಅಲ್ಲ ಅದೊಂದ ಬೌಧಿಕ ರಚನೆ.

ಆದುದರಿಂದ ನಾವು ಯಾವುದೇ ವಿಧ್ವಾಂಸರಿಗೆ ಭಾಷಣಕಾರರಿಗೆ ರಾಜಕಾರಣಿಗಳಿಗೆ ನಿಮ್ಮ ಸಂಸ್ಕೃತಿ ಯಾವುದು ಎಂದು ಕೇಳಿದರೆ ಅವರು ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದರೂ ಅವರು ಹೇಳಿದರು ಸಹ ಅವರ ಎತ್ತರಗಳು ಬೇರೆ – ಬೇರೆ ಅಭಿಪ್ರಾಯದಾಗಿರುತ್ತದೆ.

೧) "ಸಂಸ್ಕೃತಿ ಎಂದರೆ ಒಂದು ಜನಾಂಗದ ಜೀವನ ವಿಧಾನಗಳು ಮಾತ್ರ".

೨) ಸಂಸ್ಕೃತಿ ಎಂಬುದು ಜನರ ಜೀವನ ರೀತಿ, ಆ ಜೀವನ ರೀತಿ ಅನುಸರಿಸುವುದೇ ಗುಂಪು ಮತ್ತು ಸಮಾಜ.

೩) ಸಂಸ್ಕೃತಿ ಅಥವಾ ನಾಗರಿಕತೆ ಅಂದರೆ ಜ್ಞಾನ, ನಂಬಿಕೆ, ಕಲೆ, ನೀತಿ, ನಿಯಮ, ಆಚರಣೆ ಇನ್ನೂ ಮನುಷ್ಯ ಸಮಾಜ ಒಳಗೊಳ್ಳಬಹುದಾದ ಮನುಷ್ಯ ಒಂದು ಸಮಾಜದ ಸದಸ್ಯರನ್ನಾಗಿ ರೂಢಿಸಿಕೊಂಡಿರುವ ಮೊತ್ತವೆ ಸಂಸ್ಕೃತಿ.

೪) "ಸಂಸ್ಕೃತಿ ಎಂದರೆ ಸಾಮಾಜಿಕ ಸಂಪ್ರದಾಯದ ಒಟ್ಟು ಮೊತ್ತ" – [illegible] (ಉಲ್ಲೇಖ).

೫) ವಿಶಿಷ್ಟ ಸಮಾಜ ಒಂದರ ಸದಸ್ಯರು ಪಾಲುಗೊಂಡು ವಂಶ ಪರಂಪರ್ಯವಾಗಿ ಸಾಗಿಸುವ ಜ್ಞಾನ, ಮನೋಭಾವಗಳು ಹಾಗೂ ರೂಢಿಗಳ ಮೊತ್ತವೆ ಸಂಸ್ಕೃತಿ – ರಾಲ್ಫ ಲಿಂಟನ್.

೬) ಮಾನವನ ಕಾರ್ಯ ಪ್ರಪಂಚದಲ್ಲಿ ತೋರಿಬರುವ ಮನೋ ವಿಕಾಶವೇ ಸಂಸ್ಕೃತಿ – ದೇವುಡು ನರಸಿಂಹ ಶಾಸ್ತ್ರಿ.

೭) ಮನುಷ್ಯನನ್ನು ಇತರೆ ಪ್ರಾಣಿಗಳಿಂದ ಬೇರ್ಪಡಿಸುವುದೇ ಸಂಸ್ಕೃತಿ.

೮) ಯಾವ ಒಬ್ಬ ವ್ಯಕ್ತಿಯು ತಾನು ಭಾಗವಹಿಸುವ ಸಂಸ್ಕೃತಿಗೆ ಹೊರತಾಗಿ ತನ್ನ ನಿಗೂಢ ಶಕ್ತಿಗಳ ಹೊಸ್ತಿಲನ್ನು ಮುಟ್ಟಲಾರ – ರೂಟ್ ಬೆನೆಟರ್.

೯) ಸಂಸ್ಕೃತಿಯು ಏಕಕಾಲದಲ್ಲಿ ಸ್ಥಿರವು ಚಲನ ಶೀಲವು ಆಗಿರುತ್ತದೆ – ಹಾರ್ಸ್ ಶೂಟ್ಸ್

೧೦) ಜನಾಂಗ ಇಲ್ಲದೆ ಭಾಷೆಯಿಲ್ಲ, ಭಾಷೆ ಇಲ್ಲದೆ ಸಂಸ್ಕೃತಿ ಇಲ್ಲ ಸಂಸ್ಕೃತಿ ಸಮಾಜ ಭಾಷೆ – ಸಾಂಸ್ಕೃತಿಕ ಮಾನವಶಾಸ್ತ್ರದ ಪ್ರಮುಖ ದ್ವಾರಗಳು.

೧೧) Man made part of Environment – ಹರ್ಸ್ ಕೊವಿಟ್ಸ್.

೧೨) Culture are Civilization that complete while which indluces knowledge belief, Art, Morals, Laws customs and any other Capabalities and habbits acquired by man as a member of society - E. B. Taylor – 1865.

ಈ ರೀತಿಯಾಗಿ ಮೇಲ್ಕಂಡ ವಿವಿಧ ಸಂಶೋಧಕರು – ಸಂಸ್ಕೃತಿಯ ಬಗ್ಗೆ ವಿವರಣೆ ನೀಡಿದ್ದಾರೆ.

ಸಂಸ್ಕೃತಿಯ ಪರಿಕಲ್ಪನೆಯನ್ನು ವಿವರಿಸಲು ಸಂಪ್ರದಾಯವಾದಿಗಳು ಕೊಡುವ ನಿದರ್ಶನಗಳಲ್ಲಿ ನಮ್ಮ ಜನ ಜೀವನದಲ್ಲಿ ಇರುವ ದುಷ್ಟತನ, ಅಶ್ಲೀಲತೆ, ಹಿಂಸೆ, ದಡ್ಡತನ, ಗುಲಾಮಗಿರಿ, ಬೈಗುಳ, ಹಾದರ, ಕಳ್ಳತನ ಮುಂತಾದವುಗಳು ಸೇರುವುದಿಲ್ಲ. ಬದಲಿಗೆ ಸಂಸ್ಕೃತಿಯಲ್ಲಿ ವೀರತ್ವ, ಔದಾರ್ಯ, ಶೀಲ, ತ್ಯಾಗ, ಸಭ್ಯತೆ, ಬುದ್ಧಿವಂತಿಕೆ, ಪ್ರತಿಭೆ, ಮುಂತಾದ ನಿದರ್ಶನಗಳು ಮಾತ್ರ ತುಂಬಿರುತ್ತದೆ. ಸಂಸ್ಕೃತಿ ಅಂದರೆ ಸಾಹಿತ್ಯ, ಸಂಗೀತ, ಕಲೆ, ಧೀಮಂತವಾದ ವ್ಯಕ್ತಿಗಳ ವಿರೋಚಿತ ಹೋರಾಟ ಇದೆಲ್ಲ ಸಂಸ್ಕೃತಿಯಲ್ಲಿ ಸೇರುತ್ತದೆ. ಸಾಮಾನ್ಯವಾಗಿ ಇವು ಬಹು ಸಂಖ್ಯಾತರ ಮತ ಧರ್ಮದಿಂದ ಅದರಲ್ಲೂ ಉನ್ನತ ಜಾತಿ, ಹಾಗೂ ಆಳುವ ವರ್ಗದ ಬದುಕಿನಿಂದ

ಎಂದಿ ಉದಾಹರಣೆಗಳು ಸಿಗುತ್ತವೆ. ಇಲ್ಲಿ ದೇವತೆಯನ್ನು ನಿಂದಿಸುವಂತೆ ಹಾಕಲಾಗುವ ಅಸಾದಿ ಪದಗಳು ಸೇರುವುದಿಲ್ಲ. 'ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಲಿ' ಎಂಬಂತಹ ಬೀಸುವ ಪದ ಸೇರುತ್ತವೆ. ಬ್ರಿಟೀಷರ ವಿರುದ್ಧ ಹೋರಾಡಿದ ಚೆನ್ನಮ್ಮ ಸೇರುತ್ತಾಳೆ. ಎರಡು ಧಾರ್ಮಿಕ ಗುಂಪುಗಳ ನಡುವೆ ನಡೆದ ಉದ್ದೇಶದ ನಿದರ್ಶನಗಳು ಸೇರುವುದಿಲ್ಲ. ಸಾಮರಸ್ಯದ ನಿದರ್ಶನಗಳು ಸೇರುತ್ತವೆ. ಹಾಗೆಯೆ ಅಸ್ಪೃಶ್ಯತೆಯನ್ನು ನಮ್ಮ ಸಂಸ್ಕೃತಿ ಎನ್ನುವುದಿಲ್ಲ. ಕರ್ನಾಟಕ ಸಂಸ್ಕೃತಿ ವಿಶ್ಲೇಷಣೆಗೆ ಎಂಬ ತಮ್ಮ ಕೃತಿಯಲ್ಲಿ ಎಚ್. ತಿಪ್ಪೇರುದ್ರಸ್ವಾಮಿ ಅವರು ಕಲ ಹಾಕಿರುವಂತಹುದಲ್ಲ ಇದೇ ಶಿಷ್ಟ ಮನೋಧರ್ಮದಿಂದ ಬಂದ ಉದಾಹರಣಗಳಾಗಿವೆ. "ಎಂ. ಚಿದಾನಂದ ಮೂರ್ತಿಯವರ' ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ" ಕೃತಿ ಮಾಡಿರುವುದು ಇದೇ ಮನೋಧರ್ಮದಿಂದ ಶ್ರೀ ಚಿದಾನಂದ ಮೂರ್ತಿ ಅವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯನದಲ್ಲಿ ಇಂತಹುದೇ ದೃಷ್ಟಿಕೋನ ಕೆಲಸ ಮಾಡಿದೆ". ೧

"ಕನ್ನಡದ ಹೆಚ್ಚಿನ ಸಂಸ್ಕೃತಿಯ ಚಿಂತಕರು ೧೯ನೇ ಶತಮಾನದ ಸಂಸ್ಕೃತಿ ಚಿಂತಕನಾದ ಮ್ಯಾಥ್ಯೂ ಅರ್ನಾಲ್ಡ್‌ನನ್ನ ಉಲ್ಲೇಖಿಸುತ್ತಾರೆ. ೨ ವಿಶೇಷವಾಗಿ, ಡಿ.ವಿ.ಜಿ. ಹಾಗೂ ಮಾಸ್ತಿಯವರು ಈತನನ್ನು ನೆನೆಯುತ್ತಾರೆ. ೧೯೨೦ರ ಸುಮಾರಿನಲ್ಲಿ ಬಿ.ಎಂ. ಶ್ರೀಕಂಠಯ್ಯನವರು ತಮ್ಮ ಶಿಷ್ಯರನ್ನು ಸೇರಿಸಿಕೊಂಡು ಚರ್ಚಿಸುತ್ತಿದ್ದ ಕೃತಿಗಳ ಪಟ್ಟಿಯನ್ನು ವೀ.ಸೀ. ಅವರು ಒಂದೆಡೆ ಕೊಡುತ್ತಾರೆ. ಹಾಗೆಯೆ "<u>ಕಾನೂರು ಹೆಗ್ಗಡತಿ</u>" ಕಾದಂಬರಿಯಲ್ಲಿ ತಾನು 'ಮೂಡ' ಎಂದು ಭಾವಿಸಿದ ಜನರಿಗೆ ಸುಸಂಸ್ಕೃತಿಯನ್ನು ಕೊಡುವ ಉದ್ದೇಶವುಳ್ಳ ಹೂವಯ್ಯನು ಅಟ್ಟದ ಮೇಲೆ ಕುಳಿತು ಓದುವುದು. ಮ್ಯಾಥ್ಯೂ ಅರ್ನಾಲ್ಡ್‌ನನ್ನು ೧೯ನೇ ಶತಮಾನದ ಚಿಂತಕನಾದ ಅರ್ನಾಲ್ಡನು ಕನ್ನಡ ಸಂಸ್ಕೃತಿ ಚಿಂತಕರ ಮೇಲೆ ಹೆಚ್ಚಿನ ಪ್ರಭಾವ ಬೀರಿದವನು. ಈತ ಸಂಸ್ಕೃತಿಗೆ ಶಿಷ್ಟವಾದಿ, ಗುಣಗ್ರಾಹಿ, ವರ್ಗವಾದಿ ವ್ಯಾಖ್ಯಾನವನ್ನು ಕೊಟ್ಟವನು ಈ ವಾಕ್ಯಯು ಉಚ್ಚ ಸಾಮಾಜಿಕ ವರ್ಗದಿಂದ ಬಂದ ಬಹುತೇಕ ಭಾರತೀಯ ಚಿಂತಕರಿಗೆ ಪ್ರಿಯವಾಯಿತು ಇದರಿಂದ ಕೆಲವರು ಜಾತಿ ಪದ್ಧತಿಯನ್ನು ಸಮರ್ಥನೆ ಮಾಡಲು ಕೂಡ ಬಳಸಿಕೊಂಡರು. ಆದರೆ ಈ ಸಂಸ್ಕೃತಿ ವ್ಯಾಖ್ಯೆಯು ೧೯೩೦ ದಶಕದ ನಂತರ ಕರ್ನಾಟಕದಲ್ಲೂ ಬೆಳವಣಿಗೆಗಳೂ ಹಿಂಜರಿಕೆಗೆ ಒಳಗಾಯಿತು ಸಂಸ್ಕೃತಿ ಅಂದರೆ ಒಂದು ಸಮುದಾಯದ ಸಮಗ್ರ ಜೀವನದ ವಿಧಾನ ಇದರಲ್ಲಿ ಕೇಡು ಒಳಿತು ಮೇಲು ಕೀಳು ಎಂಬ ತಾರತಮ್ಯವಿಲ್ಲ ಎಂಬ ವ್ಯಾಖ್ಯೆ ಹೆಚ್ಚು ಬಳಕೆಯಾಗ ತೊಡಗಿತು.

ಈ ವ್ಯಾಖ್ಯೆ ಬಳಕೆಗೆ ಬರಲು ಬುಡಕಟ್ಟು ಸಮುದಾಯಗಳ ಅಧ್ಯಯನ ಮಾಡುವ ಸಾಂಸ್ಕೃತಿಕ ಮಾನವ ಶಾಸ್ತ್ರದ ಪ್ರೇರಣೆಯು ಒಂದು ಕಾರಣ. ಮುಖ್ಯವಾಗಿ ನಮ್ಮ ಸಮಾಜದ ಕೆಳ ಜಾತಿಗಳಿಂದ ಬಂದ ವಿಧ್ವಾಂಸರು ಈ ವ್ಯಾಖ್ಯೆಯನ್ನು ವ್ಯಾಪಕವಾಗಿ ಪ್ರಯೋಗಿಸಿದರು. ಶಿಷ್ಟವಾದಿ ವ್ಯಾಖ್ಯೆಯು ತಾರತಮ್ಯ ವಿಧಾನದಲ್ಲಿ ಹುಟ್ಟಿದರೆ ಈ ಅಶಿಷ್ಟವಾದಿ ವ್ಯಾಖ್ಯೆಯು ಮುಖ್ಯವಾಗಿ ಸಮಾಜದ ಕೆಳಸ್ತರದ [illegible] [illegible]ಗಳನ್ನು

ಮೇಲಿನ ಅನಿಸಿದ್ದನ್ನು ಒಳಗೊಳ್ಳುವಂತೆ ವಿಸ್ತಾರ ಪಡೆಯಿತು - ಬರಗೂರು ರಾಮಚಂದ್ರಪ್ಪನವರ 'ಉಪಸಂಸ್ಕೃತಿ' ಪರಿಕಲ್ಪನೆ ರೂಢಿಸಿ ಕರ್ನಾಟಕದ ಅನೇಕ ಜನ ಸಮುದಾಯಗಳ ಜೀವನ ವಿಧಾನವನ್ನು ಕಟ್ಟಿಕೊಡುವ ಸಮುದಾಯದ ಅಧ್ಯಯನದ ಪುಸ್ತಕಗಳನ್ನು ಬರೆಸಿ ಪ್ರಕಟಿಸಿದರು. ಅವರು ತಮ್ಮ ಉಪಸಂಸ್ಕೃತಿ ಪರಿಕಲ್ಪನೆಯ್ನು ಸಮಾಜ ಹಾಗೂ ಮಾನವ ಶಾಸ್ತ್ರದ ಪ್ರೇರಣೆಯಿಂದ ರೂಪಿಸಿದರು ಎಂಬುದು ಗಮನಾರ್ಹವಾಗಿದೆ. ಆದರೂ ಸಂಸ್ಕೃತಿ ಎಂಬ ಶಬ್ದ ಅಥವಾ ಪರಿಕಲ್ಪನೆಗೆ ಖಚಿತವಾದ ಅರ್ಥವ್ಯಾಪ್ತಿ ಇನ್ನೂ ದಕ್ಕಿದಂತಿಲ್ಲ ದಕ್ಕಬೇಕು ಎಂದು ಅಪೇಕ್ಷಿಸುವುದ ಕಷ್ಟಕೂಡ ಒಂದು ಶಬ್ಧಕ್ಕೆ ಅಥವಾ ಪರಿಭಾಷೆ ಪರಿಕಲ್ಪನೆಗೆ ನಿರ್ದಿಷ್ಟ ಅರ್ಥವ್ಯಾಪ್ತಿ ಇರದಿರುವುದು ಒಂದು ಸೌಲಭ್ಯವು ಹೌದು ಸಮಸ್ಯೆಯ ಹೌದು ಸೌಲಭ್ಯ ಯಾಕೆಂದರೆ ಅದನ್ನು ಹೊಸ-ಹೊಸ ಅರ್ಥಗಳನ್ನು ತುಂಬ ನಿರಂತರವಾಗಿ ಬೆಳೆಸುತ್ತಾ ಇರಬಹುದು.

ಸಂಸ್ಕೃತಿ ಶಬ್ಧದ ಅರ್ಥವು ತನ್ನ ಚರಿತ್ರೆಯುದ್ದಕ್ಕೂ ಸತತವಾಗಿ ಪರಿವರ್ತನೆ ಆಗುತ್ತ ಬಂದಿದೆ. ಪರಿವರ್ತನೆ ಎಂದರೆ ವ್ಯಾಪಕ ಅರ್ಥ. ವಿಸ್ತರಣೆಗೆ ಕೂಡ ಒಳಗಾಗುವುದು ಹೊಸ ಹೊಸ ಅರ್ಥಗಳನ್ನು ಒಳಗೊಳ್ಳುತ್ತಲೆ ಬೆಳೆಯುತ್ತಿರುವುದು. ಸದ್ಯಕ್ಕೆ ಇದೊಂದು ಬಹುರೂಪಿ ಅರ್ಥಗಳಲ್ಲಿ ಬಳಕೆಯಾಗುತ್ತಿರುವ ಶಬ್ಧವಾಗಿದೆ. ಎಂತಲೇ ಸಂಸ್ಕೃತಿ ಅಧ್ಯಯನಗಳಲ್ಲಿ ಕಳೆದ ೨೫ ವರ್ಷಗಳ ಹಿಂದೆ ಇದು ಕಾಣಿಸಿಕೊಂಡಿದ್ದಕ್ಕೂ ಈಗ ಕಾಣಿಸಿಕೊಳ್ಳುತ್ತಿರುವುದಕ್ಕೂ ತುಂಬ ಅರ್ಥವ್ಯತ್ಯಾಸ ಇರುವುದು. ಒಂದು ಕಾಲಕ್ಕೆ ಸಂಸ್ಕೃತಿ ಎಂದರೆ ಸಂಗೀತ, ಸಾಹಿತ್ಯ, ಶಿಲ್ಪ, ಚಿತ್ರ, ನೃತ್ಯ, ನಾಟಕ ಇವೇ ಮುಂತಾದ ಕಲೆಗಳಿಗೆ ಸಂಬಂಧಿಸಿದ್ದ ಎಂಬ ತಿಳುವಳಿಕೆ ಬಲವಾಗಿತ್ತು.

ಬಹುಶಃ ನಮ್ಮ ಹಿರಿಯರು ರೂಪಿಸಿ ಬಳಸಿದ ಸಂಸ್ಕೃತಿ ಪರಿಕಲ್ಪನೆಗಳ ಮೇಲೆ ದೋಷಾರೋಪನೆ ಮಾಡುವಂತೆ ಈ ಪ್ರಶ್ನೆ ಎತ್ತುವುದರಿಂದ ಬಹಳ ಪ್ರಯೋಜನವಿಲ್ಲ.

ಈಗ ನಾವು ಯಾವ ಯಾವ ಸಂಗತಿಗಳನ್ನು ಕರ್ನಾಟಕ ಸಂಸ್ಕೃತಿಯ ವ್ಯಾಖ್ಯೆಯೂ ಸೇರಿಸುತ್ತಿದ್ದೇವೆಯೇ ಅವು ಕರ್ನಾಟಕ ಬದುಕಿನಲ್ಲಿ ಹಿಂದೆಯೂ ಇದ್ದವು. ಅವುಗಳನ್ನು ಒಟ್ಟು ಸಂಸ್ಕೃತಿ ಚರ್ಚೆಯಲ್ಲಿ ಭಗವಹಿಸಲು ಒಂದೋ ಎರಡೋ ಚರ್ಚೆ ಮಾಡುವವರಿಗೆ ಈ ಕುರಿತು ತಿಳುವಳಿಗೆ ಇರಲಿಲ್ಲ. ಒಂದೊಮ್ಮೆ ತಿಳುವಳಿಕೆಯಿದ್ದರೆ ಅದನ್ನು ಕರ್ನಾಟಕ ಸಂಸ್ಕೃತಿಯು ಭಾಗವಾಗಿ ಒಪ್ಪಿಕೊಳ್ಳಲು ಬೇಕಾದ ಮನಸ್ಥಿತಿ ನಿರ್ಮಾಣವಾಗಿರಲಿಲ್ಲ. ಆದುದರಿಂದ ಅರಿವು ಹಾಗು ದೃಷ್ಟಿಕೋನಗಳು ಅಂತಿಮವಾಗಿ ಸಂಸ್ಕೃತಿ ವ್ಯಾಖ್ಯೆ ಬದಲಾಗಲು ವಿಸ್ತರಣೆಯಾಗಲು ಹಾಗೂ ಬಹುರೂಪಿಯಾಗಲು ಒತ್ತಡ ನಿರ್ಮಿಸಿದವು. ಹಾಗೆಯೆ ಬೇರೆ-ಬೇರೆ ಸಮುದಾಯಗಳು ಕರ್ನಾಟಕದ ಸಾಂಸ್ಕೃತಿಕ ರಾಜಕಾರಣಕ್ಕೆ ಪ್ರವೇಶ ಪಡೆದ ಬಳಿಕ ಅವು ಹಾಗೆ ಪ್ರವೇಶಿಸಿ ಸಮಾಜಿಕವಾಗಿ ತಮ್ಮ ತಮ್ಮ ಹಕ್ಕು ಮಂಡನೆ ಮಾಡತೊಡಗಿದ ಬಳಿಕ ಈ ವಿಸ್ತರಣೆ ಮತ್ತು ಬದಲಾವಣೆಗಳ ಪ್ರಕ್ರಿಯೆ ನಿಲ್ಲುವಂತಹದ್ದಲ್ಲ.

ಪ್ರಪಂಚದ ಒಂದು ಜೀವಂತ ಭಾಷೆ ಅಥವಾ ಸಂಸ್ಕೃತಿಯು ತನ್ನ ಮೂಲಗಳನ್ನು ಬಳಸಿಕೊಳ್ಳುವ ಇಲ್ಲವೆ ಬಿಟ್ಟುಕೊಡುವ ಅತ್ಯಮೂಲವನ್ನು ಬಳಸಿಕೊಳ್ಳುವ ಇಲ್ಲವೆ ಬದಲಿಸಿ ಕೊಡುವ ಇವೆಲ್ಲವನ್ನು ಹಾಕ ಕೆಲಸ ತನ್ನ ವರ್ತಮಾನದ ಅವಶ್ಯಕತೆಯ ಕುಲುಮೆಯಲ್ಲಿ ಕರಗಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ನಿರಂತರವಾಗಿ ತೊಡಗಿಕೊಂಡಿರುತ್ತದೆ. ಹೊರಗಿನದಕ್ಕೆ ಬೆದರುವ ಹಾಗೂ ತೆರೆದುಕೊಳ್ಳುವ ಅದರ ಆತಂಕ ಆನಂದಗಳು ಕೆಲವೊಮ್ಮೆ ನಿಜ ಇರಬಹುದು ನಟನೆಯೂ ಇರಬಹುದು. ಈ ರೀತಿಯಾಗಿ ಜಾಗತೀಕರಣ ಒತ್ತಡದೊಳಗೆ ಇಂತದೊಂದು ತಯಾರಿಯನ್ನು ದೇಶೀ ಭಾಷೆಗಳು ಹಾಗೆಯೆ ಅಧಿಕಾರವಿಲ್ಲದ ಸಮುದಾಯಗಳು ಕೂಡ ಮಾಡುತ್ತಿರುಬಹುದು.

ಒಟ್ಟಿನಲ್ಲಿ ಸಂಸ್ಕೃತಿ ಶಬ್ದಕ್ಕೆ ಒಂದು ದೇಶದ ಅಥವಾ ಜನಾಂಗದ ಮಾನಸಿಕ ಸಾಧನೆ ನಾಗರೀಕತೆ ಎಂಬ ಅರ್ಥವನ್ನು ನೀಡಿದೆ ಹಾಗೆಯೆ ಸಂಸ್ಕೃತಿಯು ಆಡುವ ಭಾಷೆ. ಹುಟ್ಟಿದ ಜಾತಿ, ಅನುಸರಿಸುವ ಧರ್ಮ, ವಾಸಿಸುವ ಪ್ರದೇಶಗಳನ್ನು ಒಳಗೊಂಡಿರುತ್ತದೆ.

**ಷರಾ:-** ದಲಿತ ಸಂಸ್ಕೃತಿ, ಬ್ರಾಹ್ಮಣ ಸಂಸ್ಕೃತಿ, ಮುಸ್ಲಿಂ ಸಂಸ್ಕೃತಿ, ಇವೆಲ್ಲ ಒಂದು ಸಮುದಾಯ ಎಂದು ಕಟ್ಟಿಸಿಕೊಂಡರು. ಇವು ಅಖಿಲ ಭಾರತೀಯ ಸಮುದಾಯಗಳಾಗಿವೆ. ಅವುಗಳಲ್ಲಿ ಭಾಷೆ, ಊಟ, ಉಡುಪು, ದೈವ ಕೊಡುಕೊಳ್ಳವಿಕೆ ಆಚರಣೆ ನಂಬಿಕೆಗಳು ಸಂಸ್ಕೃತಿಯಲ್ಲಿ ಅಡಗಿವೆ ಎಂದೂ ಹೇಳಬಹುದಾಗಿದೆ.

## ಅಡಿ ಟಿಪ್ಪಣಿಗಳು

೧) ಡಾ॥ ರೆಹಮತ್ ತರೀಕೆರೆ – ಕನ್ನಡ ಸಂಶೋಧನೆ – ಪುಟ – ೨

೨) ಡಾ॥ ರೆಹಮತ್ ತರೀಕೆರೆ – ಕನ್ನಡ ಸಂಶೋಧನೆ – ಪುಟ – ೬

೩) ಡಾ॥ ರೆಹಮತ್ ತರೀಕೆರೆ – ಕನ್ನಡ ಸಂಶೋಧನೆ – ಪುಟ – ೬

## ಅಧ್ಯಾಯ – ೨

**ಅಧ್ಯಯನ ವಸ್ತು ವಿಶ್ಲೇಷಣೆ:-**

ಮಂಟೇಸ್ವಾಮಿಯನ್ನು ಧರೆಗೆ ದೊಡ್ಡವರು ಎಂದು ಕರೆಯುವುದರಲ್ಲೇ ಒಂದು ತರ್ಕ ಅಡಗಿದೆ. ಸಾಮಾನ್ಯವಾಗಿ ಇಂತಹ ಮಹಾತ್ಮರು ತ್ರಿಮೂರ್ತಿಗಳ ವರದಿಂದಲೋ ಇಲ್ಲ ಅವನ ಶಾಪದಿಂದಲೋ, ಇಲ್ಲವೆ ಅವರ ಬೆವರಿನಿಂದಲೋ ಹುಟ್ಟುವುದು ಸಾಂಪ್ರಾದಾಯದ ಪುರಾಣಗಳಲ್ಲಿ ದೊರೆಯುತ್ತದೆ.

ಆದರೆ ಮಂಟೇಸ್ವಾಮಿ ಹುಟ್ಟಿನ ಪುರಾಣ ಇದೆಲ್ಲವನ್ನು ಮಿರಿದ್ದು ಇವನೇ ಜಗತ್ತಿನ ಸೃಷ್ಟಿಕರ್ತ, ತ್ರಿಮೂರ್ತಿಗಳು, ಭೂಮಿ ಸೂರ್ಯ, ಚಂದ್ರರನ್ನು ಸ್ವತಃ ಪಡೆದು ಇಡೀ ವಿಶ್ವ ಸೃಷ್ಟಿಗೆ ಕಾರಣನಾಗುತ್ತಾನೆ. ಮಾಯಾಕಾರನಾಗಿ ಅವನ ಭಕ್ತರಿಗೆ ಗೋಚರವಾಗುತ್ತಾನೆ.

ಆದರೆ ಜನಪದರು ಹೇಳುವಂತೆ ಧರೆ ಹುಟ್ಟುವುದಕ್ಕೂ ಮೊದಲೇ ಏಳು ದಿನ ಮುಂಚಿತವಾಗಿ ಧರೆಗೆ ದೊಡ್ಡವರು ಜನಿಸಿದರು ಎಂದೂ ಹೇಳುತ್ತಾರೆ.

ಮಂಟೇಸ್ವಾಮಿಗೂ ಶರಣ ಚಳುವಳಿಯ ಅಲ್ಲಮಪ್ರಭುವಿಗೂ ಕಾವ್ಯದಲ್ಲಿ ಅವಿನಾಭಾವ ಸಂಬಂಧವಿದೆ ಅನೇಕ ಬಾರಿ ಅಲ್ಲಮಪ್ರಭು ಜಗಜ್ಯೋತಿ, ಪರಂಜ್ಯೋತಿ ಎಂಬಂಥ ಪದಗಳು ಪುನಾರವರ್ತಿಯಾಗುತ್ತಿರುತ್ತವೆ. ಅಲ್ಲಮ ಅಂದಿನ ಶರಣರ ಗುಂಪಿನಲ್ಲಿದ್ದು ತನ್ನದೆ ಆದ ವಿಶೇಷತೆಯನ್ನು ಹೊಂದಿದ ನಿಷ್ಠರವಾಗಿ ಕಟ್ಟಿದ ಲಿಂಗಕ್ಕೆ ಆತ್ಮಲಿಂಗಕ್ಕೆ ಒತ್ತುಕೊಟ್ಟವನು ಶ್ರೀ ಮಂಟೇಸ್ವಾಮಿಯ ತತ್ವವೂ ಇದೇ ಇವನು ಜ್ಯೋತಿರ್ಲಿಂಗಯ್ಯ ಎಂದು ದೈವಸ್ವರೂಪವನ್ನು ಪಡೆದು ಪೂಜೆಗೆ ಅರ್ಹನಾಗುತ್ತಾನೆ.

ಮಂಟೇಸ್ವಾಮಿ ಕಾವ್ಯ ಪ್ರಾರಂಭಗೊಳ್ಳುವುದು ಕಲ್ಯಾಣ ಪಟ್ಟಣದಿಂದ ಅಲ್ಲಮ ಪ್ರಭು ಎಂದು ಕರೆಯಲ್ಪಡುವ ಗುರುವೇ ಮುಂದೇ ದಕ್ಷಿಣ ಭಾಗಕ್ಕೆ ಬಂದಾಗ ಮಂಟೇಸ್ವಮಿ ಯಾಗುವುದು ವಿಶೇಷತೆ ಮಂಟೇಸ್ವಾಮಿ ಕಾವ್ಯದ ಬಹಳ ಮುಖ್ಯ ಅಂಶವೆಂದರೆ ಮೋಡಿ, ಮಾಟ, ಮಂತ್ರ ಮಾಯಾಕಾರ ವಿದ್ಯೆಗಳು ಇಲ್ಲಿ ತುಂಬಿದೆ ಎಂದರೆ ಎಲ್ಲಿಯೂ ಅದು ಹಿಂಸೆಯ ರೂಪ ತಾಳುವುದಿಲ್ಲ. ಆದರೆ ಮಂಟೇಸ್ವಾಮಿ ಅಹಂಕಾರಿಗಳನ್ನು ಬಿಡುವವನಲ್ಲ. ಅವರು ಎಷ್ಟೇ ದೊಡ್ಡವರಾದರೂ ಅಂಥವರ ಅಸ್ತಿತ್ವವನ್ನು ಪಲ್ಲಟಗೊಳಿಸಬಲ್ಲ ಶಕ್ತಿ ಅವನಿಗಿದೆ ಎಂಥದ್ದನ್ನೂ ಅಧೀನ ಮಾಡಿಕೊಳ್ಳಬಲ್ಲ ಚಾತುರ್ಯವಿದೆ. ಸೌಮ್ಯವಾಗಿಯೇ ಎಲ್ಲವನ್ನೂ ಅಧೀನಕ್ಕೆ ತೆಗೆದುಕೊಳ್ಳುತ್ತಾನೆ. ಯಾವುದಾದರೂ ಸಾಧ್ಯವಾಗದಿದ್ದಾಗ ಮೌನಿಯಾಗುತ್ತಾನೆ. ಕುಂದೂರು ಬೆಟ್ಟ ಹತ್ತುತ್ತಾನೆ. ಅದರ ತುತ್ತ ತುದಿಯಲ್ಲಿ ಕುಳಿತು ತನ್ನ ಭಂಗಿ ಚಿಲುಮೆ ತೆಗೆಯುತ್ತಾನೆ ಮಂಟೇಸ್ವಾಮಿಯ ಭಂಗಿ ಸೇವನೆ ಕೇವಲ ಹೊಗೆ ಬಿಡುವ ಕ್ರಿಯೆ ಅಲ್ಲ

ಸಮಸ್ತ ಭೂ ವ್ಯಾಪಾರಗಳೂ ಅವರಲ್ಲಿ ಅಡಗಿಸಿ ಕಂಡುಗಟ್ಟಿದ ಭಂಗಿಯನ್ನು [illegible] ಮೇಲೆ ವಾಲುತ್ತ ಜೋಲುತ್ತಾ ಇರುವಾಗ ಅವನಿಗೆ ಪರಿಹಾರಗಳು ಹೊಳೆಯುತ್ತವೆ. ಅಂದರೆ ಜ್ಞಾನೋದಯವಾಗುತ್ತದೆ. ಆಕ್ಷಣದಲ್ಲಿ ತೆಗೆದುಕೊಂಡ ತೀರ್ಮಾನಗಳು ಫಲಿಸುತ್ತವೆ. ಇದು ಈತನ ಕಾವ್ಯದಲ್ಲಿ ಮುಖ್ಯವಾಗಿ ಕಂಡು ಬರುತ್ತದೆ.

ಮಂಟೇಸ್ವಾಮಿಯ ಪರ್ಯಟನೆಯ ಜೊತೆಗ ಸಾಗುವ ಈ ಕಥೆಯಲ್ಲಿ ಮುಖ್ಯವಾಗಿ ಶಿಶು ಮಕ್ಕಳನ್ನು ಸಂಪಾದಿಸುತ್ತಾ ಹೋಗುವುದು. ಶಿಶು ಮಕ್ಕಳನ್ನು ಪಡೆಯುವುದು ಇಲ್ಲಿ ಸಾಂಕೇತಿಕ, ಅದರ ಮೂಲಕವೇ ಒಂದೊಂದು ಜನ ವರ್ಗವೇ ಮಂಟೇಸ್ವಾಮಿ ಧಾರ್ಮಿಕ ಪರಿಧಿಯ ಒಳಕ್ಕೆ ಸೇರಿ ಬಿಡುತ್ತಾರೆ ರಾಚಪ್ಪಾಜಿ, ತೋಪಿನ ದೊಡ್ಡಮ್ಮ ಚನ್ನಾಜಮ್ಮ ಮಡಿವಾಳ ಮಾಚಯ್ಯ, ಫಲಾದರಯ್ಯ, ಸಿದ್ದಪ್ಪಾಜಿ ಇವರೆಲ್ಲಾ ಮಂಟೇಸ್ವಾಮಿ ಪಂಥದ ಮುಖ್ಯರೂವಾರಿಗಳು, ಇವರನ್ನು ಶಿಶು ಮಕ್ಕಳಾಗಿ ಪಡೆಯುವುದೇ ಒಂದೊಂದು ಕಥೆಯಾಗಿ ರೂಪುಗೊಳ್ಳುತ್ತಿದೆ.

ಜಗಂಜ್ಯೋತಿ ಧರೆಗೆ ದೊಡ್ಡಯ್ಯನವರಾದ ಮಂಟೆಲಿಂಗಯ್ಯನವರು ಭೂಮಿ, ಭೂಲೋಕ ಮತ್ತು ಮರ್ತ್ಯ ಲೋಕವನ್ನು ಪಡೆದುಕೊಂಡು ಬರಬೇಕು ಅಂತ ಹೇಳಿ ಈಗಲಿಗ ತನ್ನ ಹಿಡಿನೋಡಿ ವಿಷ್ಣು ತಿಳಿಯುವುದಿಲ್ಲ, ಮುಡಿನೋಡಿ ಬ್ರಹ್ಮ ಕೂಡ ತಿಳಿಯುವುದಿಲ್ಲ ಅಂತಹ ಮಹಾನ್ ಭಕ್ತರನ್ನು ನಾನು ಪಡೆಯಬೇಕೆಂದು ಮಂಟೇಲಿಂಗಯ್ಯನವರು ಒಬ್ಬರೆ ಹುಟ್ಟಿ ಒಬ್ಬರೆ ಯೋಚನೆ ಮಾಡಿಕೊಂಡು ಪರಂಜ್ಯೋತಿವರಾದಂತಹ ಮಂಟೇಲಿಂಗಯ್ಯನವರು ಈಗ ನಾನು ಎಲ್ಲಿಂದ ಎಲ್ಲಿಗೆ ಹೋಗಬೇಕು ಎಂದು ಯೋಚನೆ ಮಾಡಿಕೊಂಡು ಉತ್ತರ ಖಂಡಕ್ಕೆ ಸ್ವಾಮಿಯವರು ದಯಮಾಡುತ್ತಾರೆ. ಒಬ್ಬರೆ ಉತ್ತರ ಖಂಡಕ್ಕೆ ಬರುವಾಗ ನಾನು ಒಬ್ಬನೆ ಇರುವುದು ತುಂಬಾ ಬೇಸರ ಆಗುತ್ತೆ ಅಂತ ಹೇಳಿ ಗುರು ಆದಂತಹ ಮಂಟೇಸ್ವಾಮಿಯವರು ಬಲದಲ್ಲಿ ಉತ್ತೇಶ್ವರನನ್ನು ಪಡೆದುಕೊಂಡು ಎಡದಲ್ಲಿ ಮಹೇಶ್ವರನನ್ನು ಪಡೆದುಕೊಂಡು ಅವರು ಹೊನ್ನ ಹುತ್ತದ ಒಳಗೆ ಉದ್ಭವವಾಗುತ್ತಾರೆ. ಈಗೆ ಉದ್ಭವವಾದಾಗ ಪರಂಜ್ಯೋತಿಯವರು ಎಪ್ಪತ್ತೇಳು ಮಾರುದ್ದದ ಜಡೆಗಳ ಬಿಟ್ಟುಕೊಂಡು ಮೊಳೆದುದ್ದ ಗಡ್ಡವ ಬಿಟ್ಟುಕೊಂಡು ಗೇಣುದ್ದ ಮೀಸೆಯ ಬಿಟ್ಟುಕೊಂಡು ಪಂಚಮುಖದ ರುದ್ರಾಕ್ಷಿಯನ್ನು ಕೊರಳಿನಲ್ಲಿ ಧರಿಸಿಕೊಂಡು ಕಂಡುಗ ಜ್ಞಾನದ ಬುಕ್ಕು, ಕಾಲಜ್ಞಾನದ ಬುಕ್ಕು ತೆಗೆದುಕೊಂಡು ಹೊನ್ನು ಹುತ್ತದ ಒಳಗೆ ಹುಟ್ಟುತ್ತಾರೆ ಜಗದ್ಗುರು ಆದಂತಹ ಮಂಟೇಸ್ವಾಮಿಯವರು ನಾನು ಒಂದು ಕಟ್ಟಬೇಕು ಅಂತ ಹೇಳಿ ಮುತ್ತಿನ ಜೋಳಿಗೆಗೆ ಕೈ ಹಾಕಿದ್ದು ಮುತ್ತಿನ ಜೋಳಿಗೆ ಒಳಗೆ ಮಾಯ್ಕದ ಮಂತ್ರದ ವಿಭೂತಿಗಟ್ಟಿ ಇರುತ್ತದೆ [illegible] ಕಣ್ಣಿಂದ ನೋಡಿಬಿಟ್ಟು ಅದನ್ನು ಕೈಯಿಂದ ಹೊರಗೆ ತೆಗೆದು ನಾಗ ಬೆತ್ತದಲ್ಲಿ ಹೊಡೆದು ಎರಡು ಹೋಳು ಮಾಡಿ ಅದರಲ್ಲಿ ಒಂದು ಹೋಳನ್ನು ಭೂಮಿ ಮಾಡಿ ಮತ್ತೊಂದು ಹೋಳನ್ನು ಆಕಾಶ ಮಾಡುತ್ತಾನೆ. ಈ ರೀತಿ ಮಾಡಿ ಭೂಮಿಯನ್ನ [illegible] ಅಂತ ನಾಮಕರಣ ಮಾಡುತ್ತಾನೆ ಈ ರೀತಿ ಮಾಡಿ ಬಲದಲ್ಲಿ ಉತ್ತೇಶ್ವರ

[illegible] ಮಹೇಶ್ವರ ಮಧ್ಯದಲ್ಲಿ ಪರಂಜ್ಯೋತಿಯವರ [illegible] ಭೂಮಿ ತಾಯಿಯ ಮೇಲೆ ಬಲದ ಪಾದವನ್ನ ಮಡಗುತ್ತಾರೆ. ಈ ರೀತಿಯಾಗಿ ಪರಂಜ್ಯೋತಿಯವರು ಪಾದವನ್ನು ಭೂಮಿ ತಾಯಿಯ ಮೇಲೆ ಬಲದ ಪಾದವನ್ನ ಭೂಮಿ ತಾಯಿಯ ಮೇಲೆ ಸೋಕಿದಾಗ ಮುತ್ತು ರತ್ನವೆಲ್ಲಾ ಭೂಮಿಗೆ ಬರುತ್ತದೆ. ಅದೇ ರೀತಿ ಜಗದ್ಗುರು ಮಂಟೇದಲಿಂಗಯ್ಯ ಭೂಮಿಗೆ ದೃಷ್ಟಿ ಮಡಗಿದ ಕಾಲದಲ್ಲಿ ರುದ್ರಾಕ್ಷಿಯ ಒಳಗೆ ಗಿಡ ಮರ ಆಗಲಿ ಎಂದು ಶಾಪಕೊಡುತ್ತಾರೆ. ಈ ರೀತಿಯಾಗಿ ಮಂಟೇದ ಲಿಂಗಯ್ಯನವರು ಎಲ್ಲಾ ಬಿರುದುಗಳನ್ನು ಹೊತ್ತುಕೊಂಡು ಈಗ ಎಲ್ಲಿಗೆ ಹೋಗಬೇಕು ಎನ್ನುತ್ತಾ ಮುಂದೆ ಬರುವಾಗ ಕಲ್ಯಾಣ ಪಟ್ಟಣಕ್ಕೆ ಆದಿ ಗುರು ಮಂಟೇಸ್ವಾಮಿಯವರು ಬರುತ್ತಾರೆ. ಮಂಟೇಸ್ವಾಮಿಯವರು ಉತ್ತರ ದೇಶವನ್ನು ಬಿಟ್ಟು ಬಿರುದು ಲಾಂಚಾಣಗಳನ್ನು ಧರಿಸಿಕೊಂಡು ನಾನು ಈಗ ಎಲ್ಲಿಂದ ಎಲ್ಲಿಗೆ ಹೋಗಬೇಕು ಎನ್ನುತ ಪರಂಜ್ಯೋತಿಯವರು ಆದಿ ಕಲ್ಯಾಣಕ್ಕೆ ಹೋಗಬೇಕು ಎಂದು ಹೇಳಿ ಅಲ್ಲಿಂದ ಕಲ್ಯಾಣ ಪಟ್ಟಣಕೆ ಬರುತ್ತಾರೆ. ಬಂದು ಅಲ್ಲಿ ಬಸವಣ್ಣದೇವರ ಬಕುತಿಯನ್ನು ಪರೀಕ್ಷಿಸಬೇಕು ಮತ್ತು ಅವರ ಮಡದಿ ನೀಲಮ್ಮನ ಸತ್ಯ ನೋಡಲೇಬೇಕು ಎಂದು ಹೇಳಿ ಕಲ್ಯಾಣ ಪಟ್ಟಣದ ಮಠಕೆ ಬರುತ್ತಾರೆ.

ಅಲ್ಲಿ ಬಸವಣ್ಣನವರು ಮತ್ತು ನೀತಿವುಳ್ಳ ನೀಲಮ್ಮ ಅಂದರೆ ಕೋಟಿಗೊಬ್ಬ ಶರಣ, ಕುಲಕೊಬ್ಬ ಭಕ್ತಿವಂತ ಆರವತ್ತಾರು ಮಂದಿ ಜಂಗಮರು ಮೂವತ್ತು ಮೂರು ಮಂದಿ ಮುನಿಗಳು ಲಕ್ಷದ ಮೇಲೆ ತೊಂಬತ್ತೇಳು ಕೋಟಿ ಶರಣರು ಇವರು ಭಕ್ತಿಯನ್ನೆಲ್ಲಾ ನೊಡಬೇಕು ಸತ್ಯವನ್ನೆಲ್ಲಾ ನೋಡಬೇಕು ಎಂದು ಹೇಳಿ ಉತ್ತರ ಖಂಡದಲ್ಲಿ ನಿಂತು ನೋಡುತ್ತಾರೆ. ಅಲ್ಲಿ ನೋಡುವಾಗ ಕುಲಕ್ಕೆ ಒಬ್ಬ ಭಕುತನಾದಂತಹ ಕಲ್ಯಾಣದ ಬಸವಣ್ಣನವರ ಕಲ್ಯಾಣ ಪಟ್ಟಣದ ಬಸವಣ್ಣನವರ ಗದ್ದಿಗೆ ಒಳಗೆ ಪುಂಡ ಜಂಗಮರು ನೂರೇಳು ಜಂಗಮರು ಇದ್ದಾರೆ ಅಂತ ಹೇಳಿ ಆದಿ ಕಲ್ಯಾಣಕ್ಕೆ ಹೋಗಬೇಕೆಂದು ಹೇಳಿ ಅಲ್ಲಿಗೆ ಬರುತ್ತಾರೆ. ಅಲ್ಲಿಗೆ ಬರುವಾಗ ಕಲ್ಯಾಣ ಪಟ್ಟಣದಲ್ಲಿ ನಾಲಿಗಿಲ್ಲದ ಗಂಟೆ ಬಾಗಿಲಿಗೆ ಕಟಿ ಕುಡುವಿಲ್ಲದ ನಗಾರಿಯನ್ನ ಕಡೆಬಾಗಿಲಲ್ಲಿ ಮಾಡಿಕೊಂಡು ಬಸವಣ್ಣನವರು ಅರವತ್ತಾರು ಮಂದಿ ಜಂಗಮರು ಮೂವತ್ತಾರು ಮಂದಿ ಮುನಿಗಳು ಲಕ್ಷದ ಮೇಲೆ ತೊಂಬತ್ತೇಳು ಕೋಟಿ ಶರಣರನ್ನ ಬರಮಾಡಿಕೊಂಡು ಬಸವಣ್ಣನವರು ಒಂದು ದಿನ ತಪ್ಪದಂತೆ ನಿತ್ಯ ಭೋಜನ ಮಾಡುತ್ತಾರೆ ಅಂದರೆ ಕಲ್ಯಾಣಪಟ್ಟಣದಲ್ಲಿ ಅನ್ನದಾನ ಮಾಡುತ್ತಾರೆ. ಆಗ ಮಂಟೇಲಿಂಗಯ್ಯನವರು ಅನ್ನದಾನ ಮಾಡುವ ಬಸವಣ್ಣನವರನ್ನ ನೋಡಬೇಕು ಅಂತಹೇಳಿ ಕುಷ್ಟ ರೋಗಿಯಾಗಿ ಧರೆಗೆ ದೊಡ್ಡವರು ಬಸವಣ್ಣನವರ ಕಲ್ಯಾಣಕ್ಕೆ ಬರುತ್ತಾರೆ. ಆಗ ಬಸವಣ್ಣನವರ ಬಾಯಲ್ಲಿ ಒಂದು ಕೆಟ್ಟ ವಾರ್ತೆ ಬರುತ್ತದೆ. ಅದೇನೆಂದರೆ ಈ ಕಲ್ಯಾಣದ ಭೋಜನಕ್ಕೆ ಕುಷ್ಟ ರೋಗಿಗಳು, ರೋಗ ಉಳ್ಳಾದವರು, ಅನ್ನ ಊಟ ಮಾಡಬೇಕು ಅಂತ ಬರುತ್ತಾರೆ ಅಂತವನ್ನ ನೀವು ಒಳಗಡೆ ಬಿಡಬೇಡಿ ಎಂದು ಕಡೆ ಬಾಗಿಲನ್ನ ಕಾಯುತ ಕಟುಗರ ಸಂಗಯ್ಯನಿಗೆ ಹೇಳುತ್ತಾರೆ. ಏಕೆಂದರೆ

ಒಳಗೆ [illegible]ವುಳ್ಳಾದವರು ಜಟೆಯಾಗಿರುವಂತಹ ಶರಣರು [illegible] ಬರುತ್ತಾರೆ ಈ ರೀತಿಯಾಗಿ ಒಳ್ಳೆ ಶರಣರ ಜೊತೆ ಒಳಗೆ ಈ ಕೊಳಕು ಜಂಗಮರನ್ನ ಒಬ್ಬರನ್ನು ಬಿಡಬ್ಯಾಡ, ಅಂದ ಚಂದಾವುಳ್ಳಾದವರು ಬಂದರೆ ಮೊದಲನೆ ಊಟಕೆ ಬಿಟ್ಟುಬಿಡು ಎಂದೂ ಹೇಳುತ್ತಾನೆ.

ಈ ಸಮಯದಲ್ಲಿ ಮಂಟೇಸ್ವಾಮಿಯವರು ಕುಷ್ಠರೂಗಿಯಾಗಿ ಕಲ್ಯಾಣ ಪಟ್ಟಣಕ್ಕೆ ಬರುವಾಗ ಕಡೆ ಬಾಗಿಲಲ್ಲಿ ಇದ್ದ ಕಟುಕರ ಸಂಗಯ್ಯ ಇವನ್ನು ಒಳಗಡೆ ಬಿಡುವುದಿಲ್ಲ ಆಗ ಮಂಟೇಸ್ವಾಮಿಯವರು ಏನೇ ಹೇಳಿದರೂ ಒಳಗಡೆ ಬಿಡದೆ ಸಂಗಯ್ಯನು ಇಲ್ಲಿಗೆ ಅನ್ನ ತರಿಸಿಕೊಂಡು ಊಟ ಮಾಡ್ಕಂಡು ಹೋಗುವುದಾದರೆ ಹೋಗು ಹೆಚ್ಚು ಕಮ್ಮಿ ಮಾತಾನಾಡಿದರೆ ದೊಣ್ಣೆ ತೆಗೆದುಕೊಂಡು ನಿನ್ನ ಎಕ್ಕತ್ತಿನ ಮೇಲೆ ಮೂರು ಏಟು ಹೊಡೆಯುತ್ತೇನೆ. ಆದರೆ ಅ ಏಟು ಧರೆಗೆ ದೊಡ್ಡವರಿಗೆ ಬೀಳದೆ ಸ್ನಾನ ಮಾಡುತ್ತಿದ್ದ ಬಸವಣ್ಣನವರಿಗೆ ಬೀಳುತ್ತದೆ ಮತ್ತೊಂದು ಏಟು ನೀಲಮ್ಮನವರಿಗೆ ಬೀಳುತ್ತದೆ ಆಗ ಬಸವಣ್ಣನವರು ಧೂಪದುಂಡಿಗೆ ಹಿಡಿಕಂಡು ಶಿವಾ ಶಿವಾ ಅಂತ ಕೈ ಮುಗಿಯುತ್ತಿದ್ದವರು ಭೂಮಿಗೆ ರಪ್ಪನೆ ಬೀಳುತ್ತಾರೆ ಅದೇರಿ ರೀತಿ ನೀಲಮ್ಮನವರು ಸಹ ಅಶ್ ಅಂತ ಕುಳಿತುಕೊಳ್ಳುತ್ತಾರೆ ಆಗ ಅವರಿಬ್ಬರು ಸಹ ಮಾತಾನಾಡಿಕೊಂಡು ನಾನೇನು ತಪ್ಪು ಮಾಡ್ಡೆ ನನಗೇಕೆ ಹೊಡೆದ್ರಿ ಎಂದೂ ನೀಲಮ್ಮ ಕೇಳುತ್ತಾರೆ.

ಆಗ ಕುಷ್ಠರೋಗಿ ಅವತಾರದಲ್ಲಿದ ಸ್ವಾಮಿ ಹರಳಯ್ಯನವರ ಚಮ್ಮಳಿಗೆ ಹೊಲೀವಂತ ಅಟ್ಟೇ ಉನಿಯಾಕುವ ತಿಪ್ಪೇಗುಂಡಿಗೆ ಬಂದು ಎಡ ಬಲ ತಿರುಗಿ ನೋಡುತ್ತಾರೆ. ಆಗ ದೊಡ್ಡವರ ದಿವ್ಯ ದೃಷ್ಟಿಗೆ ಬೆನ್ನಿಂದೆ ಲಿಂಗ ಬರುತ್ತಿತ್ತು ಈ ಲಿಂಗದ ಹಿಂದೆ ಬಸವಣ್ಣ – ನೀಲಮ್ಮ ಓಡೋಡಿ ಬರುತ್ತಿದ್ದರು. ಬಸವಣ್ಣ ಮತ್ತು ನೀಲಮ್ಮನ ದುಡ ನೋಡಬೇಕು ಅಂತ ಹೇಳಿ ಗುರುದೇವ ಹನ್ನೆರಡು ವರುಷದ ಕಪ್ಪೇ ಪಾಯ್ಸಕ್ಕೆ ಬಂದು ಬಿಟ್ಟರು ಆಗ ಲಿಂಗನೂ ಕೂಡ ಬೀಳುತ್ತಾರೆ, ಆಗ ಬಸವಣ್ಣ ಮತ್ತು ನೀಲಮ್ಮ ಏರಿ ಮ್ಯಾಲೆ ನಿಂತುಕೊಂಡು ನೀಲಮ್ಮ ಈ ಜಗತ್ತಿನ ಗುರುಗಳು ಹರಳಯ್ಯನ ತಿಪ್ಪೇಗುಂಡಿಗೆ ಬಿದ್ದು ಬಿಟ್ರಲ್ಲ ಮತ್ತು ಈ ಲಿಂಗವೂ ಸಹ ಬಿದ್ದು ಹೋಯ್ತಲ್ಲ ಎಂದೂ ಹೇಳಿ ನೀಲಮ್ಮನನ್ನು ಬಸವಣ್ಣ ಕೇಳುತ್ತಾರೆ. ನೀಲಮ್ಮ ಬಸವಣ್ಣನವರಿಗೆ ಇವರು ಸಾಮಾನ್ಯವಾದ ಪುರುಷರಲ್ಲ ಇವರು ನಮಗಿಂತ ಹೆಚ್ಚಿನ ಶಿವಶರಣರು ಮಹಾತ್ಮರೇ ಆಗಿರಬಹುದು ಎಂದೂ ಹೇಳಿ ಅವರ ಪಾದ ಹಿಡಿದು ಏಳಿರಿ ಸ್ವಾಮಿ ಅಂದರು ಆಗ ನೀಲಮ್ಮನವರ ಮಾತನೇ ಕೇಳಿ ಬಸವಣ್ಣನವರು ದೊಡ್ಡ ವರ ಬಲದ ಪಾದ ಹಿಡ್ಕಂಡು ಎಳೆದರಂತೆ ಆಗ ಎಳೆದ ತಕ್ಷಣ ಗುರುಗಳ ಪಾದ ಕಿತ್ತು ಬರುತ್ತದೆ ಅಂದ್ರಂತೆ ಆಗ ಬಸವಣ್ಣನವರು ನೀಲಮ್ಮನಿಗೆ ಭಯ ಪಟ್ಟುಕೊಳ್ಳಬೇಡ ಅಂತಹೇಳಿ ಅವರ ಹತ್ತಿರ ಇರುವಂತಹ ಪಟ್ಟೇ ವಸ್ತ್ರವನ್ನು ತೆಗೆದು ನೀಲಮ್ಮನಿಗೆ ಕೊಡುತ್ತಾರೆ. ಆಗ ನೀಲಮ್ಮ ಭೂಮಿಗೆ ಹಾಸುಬಿಟ್ಟು ಈ ಪಾದವನ್ನ ವಸ್ತ್ರದ ಮೇಲೆ ಮಡಗಿ ದೇವ ಅನ್ನುತ್ತಾರೆ. ಮತ್ತು [illegible] ಪಾದ ಹಿಡಿದು ಎಳೆಯಿರಿ ಸ್ವಾಮಿ ಅಂದರು ಆಗ ಆ ಪಾದವು

ಕಿತ್ತು ಬರುತ್ತದೆ. ಅದನ್ನ ಸಹ ಪಟ್ಟೆ ವಸ್ತ್ರಕ್ಕೆ ಮಡಗಿಸಿ ಆಗ ನೀಲಮ್ಮನವರು ಕೈಯಿಡಿದು ಎಳೀರೀ ಎಂದಾಗ ಕೈಗಳನ್ನ ಹಿಡಿದು ಎಳೆದಾಗ ಕೈಗಳೇ ಕತ್ತು ಬಂದಪ್ಪ ಎನ್ನುತ್ತಾರೆ ಬಸವಣ್ಣನವರು ಆಗ ನೀಲಮ್ಮನವರು ಕೈಗಳನ್ನು ಪಟ್ಟೆ ವಸ್ತ್ರದ ಮೇಲೆ ಮಡಗಿ ಎಂದು ಹೇಳುತ್ತಾರೆ. ಆಗ ಬಸವಣ್ಣನವರು ತಲೆ ಹಿಡಿದು ಎಳೇವಾಗ ಕತ್ತಿನ ಸರಸವೇ ಕಿತ್ತು ಬರುತ್ತದೆ. ನೀಲಮ್ಮನವರು ಕತ್ತನ್ನು ನನ್ನ ಕೈಗೆ ಕೊಡಿ ಎಂದಾಗ ಬಸವಣ್ಣನವರು ತಲೆಯನ್ನು ತೆಗೆದು ನೀಲಮ್ಮನ ಕೈಗೆ ಕೊಡುತ್ತಾರೆ ಆಗ ಮುಂಡವನ್ನ ತಕ್ಕೊಂಡು ಪಟ್ಟೇವಸ್ತ್ರದ ಮೇಲೆ ಮಡಗುತ್ತಾರೆ. ಆಗ ಎಲ್ಲವನ್ನ ಪೊಟ್ಟಣ ಕಟ್ಟಿಕೊಂಡು ನೆತ್ತಿಯ ಮೇಲೆ ಹೊತ್ತಿಕೊಂಡು ನೀಲಮ್ಮನವರು ತಲೆಯನ್ನು ತೆಗೆದುಕೊಳ್ಳುತ್ತಾರೆ. ಬಸವಣ್ಣನವರು ಮುಂಡ ಹೊತ್ತುಕೊಳ್ಳುತ್ತಾರೆ ಇಬ್ಬರು ಗುರುಮಠಕ್ಕೆ ಬರುತ್ತಾರೆ. ಬರುವಾಗ ಮುಂದೆ ಮುಂದೆ ಬಸವಣ್ಣ ಹಿಂದೆ-ಹಿಂದೆ ನೀಲಮ್ಮನವರು ಬರುವಾಗ ರಕ್ತವೇ ಆಕರವಾಗಿ ಮಾಂಸದ ಪೊಟ್ಟಣ ಮಾಡಿದರಂತೆ ಆಗ ಬಸವಣ್ಣನವರ ಎರಡು ಕೆನ್ನೆಯಲ್ಲಿ ಬಸವಣ್ಣನವರ ತಲೆಯಿಂದ ರಕ್ತ ಹರಿದು ಬರುತ್ತಿದೆ ಈ ರೀತಿಯಾಗಿ ಗುರು ಮಠಕ್ಕೆ ಬಸವಣ್ಣನವರು ಬರುವಾಗ ಆಗ ಶಿವಶರಣರೆಲ್ಲರೂ ಊಟ ಮಾಡುತ್ತಿರುತ್ತಾರೆ. ಬಸವಣ್ಣನವರನ್ನು ಶಿವಶರಣರು ಕಣ್ಣಿಂದ ನೋಡಿಬಿಟ್ಟು ಯೋಚನೆ ಮಾಡುತ್ತಾ ಅಂದ್ರೇ ಏನಪ್ಪ ಸತ್ಯ ಶರಣರೆ ಬಸವಣ್ಣನವರ ನೋಡಿ ಅನ್ನ ಊಟ ಮಾಡ್ತಿದ್ದೀರಲ್ಲ ನಿಮಗೆ ಅನ್ನ ನೀಡಬಹುದು ಆದರೆ ಕಲ್ಯಾಣ ಪಟ್ಟಣ ಕೆಟ್ಟುಹೋಯಿತು ಅಂತ ಹೇಳಿ ಮಾತನಾಡಿಕೊಳ್ಳುವಾಗ ಅಲ್ಲಿಂದ ಮತ್ತೊಬ್ಬ ಶರಣರು ಬಸವಣ್ಣನವರು ತೆಗೆದುಕೊಂಡು ಹೋಗುತ್ತಿರುವುದು ಬಾಕಿ ಪೊಟ್ಟಣ ತಾಯಿ ನೀಲಮ್ಮ ಹಿಂಡ್ಕಂಡೋಯ್ತಿರೋದು ಹೆಂಡರ ಸಾರಾಯಿ ಗಡಿಗೆ ಅಂತ ಹೇಳುವಾಗ ಪತಿ ಪತ್ನಿ ಇಬ್ಬರು ಕೈಯೆತ್ತಿ ಮುಗಿದಾಗ ಧರೆಗೆ ದೊಡ್ಡವರು ಮುಂಭಾಗದಲ್ಲಿ ನಿಂತುಕೊಂಡರಂತೆ ಆಗ ಬಸವಣ್ಣನವರಿಗೆ ನಿನ್ನ ಸತ್ಯಕ್ಕೆ ಒಪ್ಪಿದೆ ಭಕ್ತಿಗೆ ಮೆಚ್ಚಿದೆ ಕಂದಾ ಅಂತೇಳಿ ಪರಂಜ್ಯೋತಿಯವರ ಉತ್ತರ ಖಾಂಡವನ್ನ ಬಿಟ್ಟು ನಿನ್ನ ಭಕ್ತಿ ಕಂಡಾಗಾಯ್ತು ಸತ್ಯ ಕಂಡಾಗಾಯ್ತು ಧರೆಗೆ ದೊಡ್ಡವರು ಹೇಳ್ತಾರೆ ಬಸವಣ್ಣ ನೋಡಪ್ಪ ಕಳ್ಳ ಜಂಗಮರೆಲ್ಲ ಕಲ್ಯಾಣ ಬಿಟ್ಟು ಹೊರಟುಹೋದ್ರು ಸತ್ಯ ಶರಣರು ಮಾತ್ರ ಇಲ್ಲಿದ್ದಾರೆ. ಆದ್ದರಿಂದ ಕಲ್ಯಾಣ ಮಠ ಉದ್ದಾರ ಆಗಲಿ ಅಂತೇಳಿ ಹೆಸರನ್ನೇ ಇನ್ನೊಂದು ಈ ಕಲ್ಯಾಣದಲ್ಲಿ ನೀನು ಬಾಳಿ ಬದುಕಬೇಕು ಕಂದ ಅಂದರಂತೆ ಸ್ವಾಮಿ ಧರೆಗೆ ದೊಡ್ಡವರು.... ಆಗ ಬಸವಣ್ಣನವರ ಮತ್ತು ತಾಯಿ ನೀಲಮ್ಮ ಜಗದ್ಗುರುವಿಗೆ ಮಂಗಳಾರತಿ ಬೆಳಗಿ ದೊಡ್ಡವರ ಪಾದಕೆ ಶರಣು ಮಾಡುತ್ತಾರೆ ಆಗ ಕಲ್ಯಾಣ ಪಟ್ಟಣದಲ್ಲಿದ್ದ ಹಗಲು ದೀಪಗಳಲ್ಲಿ ಪಕ್ಕ ಪಕ್ಕನೇ ಹತ್ತಿಕೊಂಡಂವತೆ ಆಗ ಇಡೀ ಕಲ್ಯಾಣ ಪಟ್ಟಣ ಪ್ರಕಾಶವಾಯ್ತು ಆಗ ಕಲ್ಯಾಣ ಪಟ್ಟಣ ಬಿಟ್ಟು ಬರುತ್ತಾರೆ. ಮಂಟೇದ ಲಿಂಗಯ್ಯನವರು ಕಲ್ಯಾಣ ಪಟ್ಟಣ ಬಿಟ್ಟು ಅಲ್ಲಿಂದ ಪರಂಜ್ಯೋತಿ ಜ್ಯೋತಿರ್ಲಿಂಗಯ್ಯ ಎಂದೆನಿಸಿಕೊಂಡು ನಾಮಕರಣ ಕಟ್ಟಿಸಿಕೊಂಡು ಸತ್ಯ ಶರಣರ ಕೈಯಲ್ಲಿ ಚಪ್ಪಾಳೆ ಹೊಡಿಸ್ಕೊಂಡು ಕಲ್ಯಾಣದ ಪಟ್ಟಣ ಬಿಟ್ಟು ಬಸವಣ್ಣನವರ ಮುಂಭಾಗದಲ್ಲಿ ನಿಂತ್ಕೊಂಡು ಬಸವಣ್ಣ

ಇವತ್ತು ನಿಮ್ಮ ಆದಿ ಕಲ್ಯಾಣ ಪಟ್ಟಣಕ್ಕೆ ನಾನು ಬಂದಿದ್ದಕ್ಕೆ ನಿಮಗೆ ಬೇಕಿಲ್ಲದಂತ ಒಬ್ಬ ಶಿವಶರಣನನ್ನು ನಮಗೆ ಕೊಡಪ್ಪ ಎಂದು ಹೇಳುತ್ತಾರೆ.

ರಾಚಪ್ಪಾಜಿಯವರನ್ನ ಶಿಶು ಮಗನಾಗಿ ಪಡೆದುಕೊಂಡು ಅವರ ಕೈಯ್ಯನ್ನ ಇಡಕೊಂಡು ಕಲ್ಯಾಣ ಪಟ್ಟಣ ಬಿಟ್ಟು ಕಡೇ ಬಾಗಿಲಿಗೆ ಬಂದರಂತೆ ಆಗ ಕಡೇ ಕೈಲಾಸದ ಬಾಗಿಲಲ್ಲಿ ಮೋಡಿಕಾರ ದೇವ, ರಣ ಮೋಡಿ ಕಾರ ಅಂತ ನಾಮಕರಣ ಪಡೆದು ರೆತುಗಣ್ಣ ರಾಚಪ್ಪಾಜಿಯವರು ಮತ್ತು ಧರೆಗೆ ದೊಡ್ಡವರು ತಲೆ ದಸೆಯಲ್ಲಿ ಮಡಗಿದ್ದಂತಹ ಮುತ್ತಿನ ಜೋಳಿಗೆ ಮುಂಗೈಗೆ ಹಾಕಿಕೊಂಡು ಜೋಳಿಗೆಯಲ್ಲಿದ್ದ ಕಪ್ಪನ್ನು ತಕ್ಕಂಡು ಮೋಡಿ ಮಸ್ತಪಗಾರರ ಬಳಿಗೆ ಗುರುವು ಬರುತ್ತಾರೆ ಆಗ ಅಲ್ಲಿದ್ದ ಮಸ್ತಪಗಾರರು ಏನಯ್ಯ ಜಂಗಮ! ಯಾವ ಪಟ್ಟಣ! ಯಾವ ರಾಜ್ಯ! ಯಾವ ಸೀಮೆ ನಿಮ್ಮ ಊರ್ಯಾವುದು! ನಾಡ್ಯಾವುದು! ನಿನ್ನ ದೇಶ ಯಾವುದು! ಎಂದರು. ಆಗ ರಾಚಪ್ಪಾಜಿಯವರು ನಾನು ಕಲ್ಯಾಣ ಪಟ್ಟಣದಲ್ಲಿ ಶಿಶು ಮಕ್ಕಳ ಜೊತೆಯಲ್ಲಿ ಬದುಕಿ ಬಾಳುತ್ತಿದ್ದವನು ಶರಣರ ಹೊಟ್ಟೇಲಿ ಹುಟ್ಟಿ ಶರಣರ ಗರ್ಭದಲ್ಲಿ ಬೆಳೆದು ಈಗ ಬಸವಣ್ಣನವರ ಕೈಲಿ ಧರೆಗೆ ದೊಡ್ಡವರ ಕೈಲಿ ಕರಿಯತಿ ರಾಚಪ್ಪಾಜಿ ಎಂದು ನಾಮ ಕರಣ ಮಾಡಿಸಿಕೊಂಡು ಧರೆಗೆ ದೊಡ್ಡವರಿಗೆ ಶಿಷ್ಯರಾಗಿ ಬಂದಿದ್ದೇನೆ ಮೋಡಿ ಮಸ್ತಪಗಾರರೇ ಎನ್ನುತ್ತಾರೆ. ನೋಡೋ ಇವತ್ತಿನಗಂಟ ಭೂಮಿ ಹುಟ್ಟಿದ ಕಾಲದಿಂದ ಮೋಡಿ ಬಳಗೆ ಘನ ವಿದ್ಯೆಕಾರರು ನಾವು ಅಂತ ಹೇಳಿ ಲೋಕವೇ ಹೋಗಳುವುದು ಅಂತ ಮೋಡಿ ಮಸ್ತಪಕಾರರು ರಾಚಪ್ಪಾಜಿರನ್ನು ಹಿಯಾಳಿಸುತ್ತಾರೆ. ಆಗ ರಾಚಪ್ಪಾಜಿಯವರು ನಮ್ಮ ಗುರುವನ್ನ ತಿರಸ್ಕಾರ ಮಾಡಬೇಡಿರಿ, ನನ್ನನ್ನ ಕೂಡ ಅಳಿಸಬ್ಯಾಡ್ರಿ, ನಮ್ಮ ಗುರು ಅಂದರೆ ಭೂಲೋಕಕೆಲ್ಲ ದೊಡ್ಡವರು ನಾಡು ದೇಶವನ್ನೆ ಪಡೆದಂತಹ ಜಗದ್ಗುರು ಅಂತ ಹೇಳುತ್ತಾರೆ. ರಾಚಪ್ಪಾಜಿಯವರು ಹೇಳುತ್ತಾರೆ ನಮ್ಮ ಗುರುಗಳ ಮೈಮೆ ಏನು ಅನ್ನುವುದು ಈ ಭೂಲೋಕದ ನಡುವೆ ನರಲೋಕದಲೆಲ್ಲ ಕಂಡವರೇ ಮೊದಲಿಲ್ಲ. ಅವರ ಮೈಮೆ ತಿಳಿದವರು ವೇದಲಿಲ್ಲ ಕಣಪ್ಪ ಅವರ ಮಾಯ ಕಂಡಿರುವವರು ನರ ಮಾನವ ಒಬ್ಬರು ಇಲ್ಲ ಈಗ ನಾನು ಧರೆಗೆ ದೊಡ್ಡವರಿಗೆ ಶಿಶು ಮಗನಾಗಿ ಕಲ್ಯಾಣ ಪಟ್ಟಣದಿಂದ ಬಂದಿದ್ದೇನೆ ಎನ್ನುತ್ತಾರೆ.

ಅಲ್ಲಿದ್ದ ಮೋಡಿಕಾರರು ಅಣ್ಣಾ ಈ ಜಂಗಮ ಬಂದಿರೋದು ನೋಡಿದ್ರೆ ಬಹಳ ಆಶ್ಚರ್ಯ. ಇಷ್ಟೊತ್ತುಗಂಟ ಮಾತಾಡಿದ ಮಾತಿಗಿಂತ ಮೇಲಾದ ಮಾತನ್ನೇ ಆಡುತ್ತಿದ್ದಾನೆ. ಕೀಳಾದ ಮಾತಾಡುತ್ತಿಲ್ಲ. ಇವನಾಡುವಂತ ಮಾತ ಕೇಳಿದರೆ ಇವನೊಂದಿಗೆ ನಾನು ಮೋಡಿ ಆಟ ಮಾಡಿ ಆ ಗುರುಗೆ ಇವನ ಮಗನು ಇರದಂಗೆ ಮಾಡಿ ಇವನ ಮೋಡಿ ಆಟದಲ್ಲಿ ಸೋಲಿಸಿ ಇವನನ್ನ ನಮ್ಮ ಪಟ್ಟಣದಿಂದ ಹೊರಗಡೆ ಕಳುಹಿಸಬೇಕು ಕಣಪ್ಪ ಅಂತ ಮಾತಾಡಿಕೊಳ್ಳುತ್ತಾರೆ. ಅವರು ನೀನ್ನಂಥ ದೊಡ್ಡವನಾದರೆ ಗುರು ಅಂತ ದೊಡ್ಡವನಾದರೆ ನಾವೇಳುವಂತಹ ಸತ್ಯ ಮೋಡಿ ಆಟ ನಿಗೆ ಬರುತ್ತದೆಯೇ ನಾವು ಮಾಡಿದಂತ ಮೋಡಿ ಆಟವನ್ನ ನಾನು ಗೆಲ್ಲದೇ

[illegible] ನಾನು ಧರೆಗೆ ದೊಡ್ಡವರ ಮಗನಾಗುತ್ತೇನೆ ನಾನು [illegible] ಮಗನಾಗುತ್ತೇನೆ ಎಂದರಂತೆ. ಆಗ ಮೋಡಿಕಾರರು ರಾಚಪ್ಪಾಜಿಯವರನ್ನ ಕರೆದುಕೊಂಡು ಬರುತ್ತಾರೆ. ಎಲ್ಲಿಗೆ ಬರುತ್ತಾರೆ ಅಂದರೆ ಏಳು ಆನೆ ತೂಕದಂಥ ಪಡುಗುಂಡಿನ ಬಳಿಗೆ ಬಂದರು ಇದು ಏಳು ಆನೆಯ ತೂಕದ ಪಡುಗುಂಡು ಬಂದರಂತೆ. ಆಗ ರಾಚಪ್ಪಾಜಿಯವರಿಗೆ ಮೋಡಿಗಾರರು ಇದನ್ನೇ ನಿಂಬೆ ಹಣ್ಣ ಮಾಡಿ ಎರಡು ಬೆರಳಲ್ಲಿ ಎತ್ತುಕೊಳ್ಳುತ್ತೇನಿ ಇಲ್ಲವಾದರೆ ಮೋಡಿ ಆಟವನು ಆಡು ನೀನು ನೀನಾದರೆ ಈ ಪಡಗುಂಡು ನಿಂಬೆಹಣ್ಣು ಮಾಡಿ ಎರಡು ಬೆರಳಲ್ಲಿ ಎತ್ತಿತೋರಿಸು ಇಲ್ಲವಾದರೆ ನಾವು ಮೋಡಿ ತೋರಿಸುತ್ತೇವೆ ಎನ್ನುತ್ತಾರೆ. ರಾಚಪ್ಪಾಜಿಯವರು ಕೋಪ ಆಗಬೇಡಿ ಸಿಟ್ಟು ಪಡಬೇಡಿ ಅಣ್ಣಂದಿರೇ ಈಗಲೇ ನನ್ನ ಗುರುಪಾದ ನೆನಸಿಕೊಳ್ಳುತ್ತೇನೆ ಸ್ವಲ್ಪ ನಿಧಾನಿಸಿ ಅಂದರಂತೆ ಆಗ ರಾಚಪ್ಪಾಜಿಯವರು ಧರೆಗೆ ದೊಡ್ಡವರ ಮುತ್ತಿನ ಜೋಳಿಗೆಯಲ್ಲಿದ್ದ ಮಾಯದ ಕಪ್ಪು ಮಲೆಯಾಳದ ಕಪ್ಪನ್ನು ಧರಿಸಿ ಜಗಂಜ್ಯೋತಿ ಧರೆಗೆ ದೊಡ್ಡಯ್ಯ ಎಂದರಂತೆ ಆಗ ಪಡುಗುಂಡು ಮೋಡಿಗಾರರ ಕಣ್ಣಲ್ಲಿ ಎರಡು ಬೆರಳುಗಾತ್ರ ನಿಂಬೆಹಣ್ಣಿನ ರೀತಿ ಕಾಣುತ್ತಿದೆ ಆಗ ಮೋಡಿಕಾರರು ಎರಡು ಬೆರಳಲ್ಲಿ ಈ ನಿಂಬೆಹಣ್ಣು ಎತ್ತಿಬಿಡುತ್ತಾನೆ ಎಂದೂ ಮಾತಾನಾಡಿಕೊಂಡು ಇವನು ಗೆದ್ದರೆ ನಾವು ಸೋತು ಹೋಗಿ ಬಿಡ್ತೀವಿ ಅಂತ ಮಾತಾನಾಡಿಕೊಳ್ಳುತ್ತಾರೆ.

ರಾಚಪ್ಪಾಜಿಯವರ ಕಣ್ಣಿಗೆ ಪಡಗುಂಡೇ ಕಾಣಿಸುತ್ತಿದೆ. ಆಗ ರಾಚಪ್ಪಾಜಿಯು ಧರೆಗೆ ದೊಡ್ಡವರನ್ನ ನೆನೆದು ಕೊಂಡಾಗ ಧರೆಗೆ ದೊಡ್ಡವರಿಗೆ ಹೊಟ್ಟೆ ಉರಿದು ಮನಸ್ಸು ಚುರುಕ್ಕೆಂದು ಭಾರೀ ಪಡುಗುಂಡಗೆ ಅರಗಣ್ಣು ಬಿಡಬಾರದು ಅಂತೇಳಿ! ಎರಡುಗಣ್ಣು ಬಿಟ್ಟು ಬಿಟ್ಟು ನೋಡುತ್ತಾರೆ! ಎರಡುಗಣ್ಣು ಬಿಟ್ಟು ನೋಡುವಾಗ ಆನೆ ಕಲ್ಲಿನ ತೂಕದ ಪಡುಗುಂಡು ಆಗಲೀಗ ಒಂದು ಹೆಬ್ಬೆಟ್ಟು ಗಾತ್ರದ ನಿಂಬೆಹಣ್ಣು ಆಯ್ತಂತೆ. ಆಗ ರಾಚಪ್ಪಾಜಿಯವರು ನಿಂಬೆ ಹಣ್ಣನ್ನು ನೋಡುತ್ತಾರೆ. ನೊಡಿದಾಗ ಅವರು ಎರಡು ಕೈಲಿ ಎತ್ತುತ್ತಾರೆ. ಈ ರೀತಿಯಾಗಿ ಪವಾಡ ನಡೆಯುತ್ತದೆ. ಮುಂದೆ ರಾಚಪ್ಪಾಜಿಯವರು ಏನಪ್ಪಾ ಆಟ ನೀವು ಒಪ್ಪುವುದಾದರೆ ಈ ಮೋಡಿ ನೀವು ಮೆಚ್ಚಿ ಹೋದ್ರೆ ಮತ್ಯಾವ ಮೋಡಿ ಮಾಟ ಮಾಡಬೇಕ್ರಪ್ಪ ಹೇಳಿಬಿಡಿ ಮೋಡಿಕಾರರೆ ಎನ್ನುತ್ತಾರೆ.

ಮೋಡಿಗಾರರು ಏ ಭಿಕ್ಷುಕ ಇನ್ಯಾವ ಮೋಡಿ ಆಟ ಮಾಡಬೇಕು ಗೊತ್ತೇನೋ ಇಲ್ಲಿ ಹರಿಯುವಂತೆ ನದಿ ಕಣ್ಣಿಂದ ನೋಡು ಹರಿಯುವಂತ ನದಿಗೆ ಬೆಳ್ಳಿಯ ಪಾದರಕ್ಷೆ ಮೆಟ್ಟುಕ್ಕೊಂಡು ಬಾಳೆ ಎಲೆ ಬಲಗೈಲಿ ಹಿಡಿದುಕೊಂಡು ಆನೆ ಉದ್ದದ ಆಳದ ನೀರಿಗೆ ಹೋಗಿ ನಾವು ಕೂತ್ಕಂಡು ಅಂಗಡಿ ಮಡಗುತ್ತೇವೆ ಆನೆ ಉದ್ದದ ನೀರಿಗೆ ನೀನು ಬಂದು ವ್ಯಾಪಾರ ಅಥವಾ ಸಾಮಾನುಗಳನ್ನ ತೆಗೆದುಕೊಳ್ಳಬೇಕಾದರೆ ನಮ್ಮ ಬಳಿಗೆ ನೀನು ಬರಬೇಕಾದರೆ ಹರಿಯುವಂತ ಸಮುದ್ರದಲ್ಲಿ ಅಂಗಾಲಿಗೆ ನೀರಾಗಬಾರದು. ಅದೇ ಪ್ರಕಾರವಾಗಿ ನೀರಿನ ಮೇಲೆ ನಡೆದುಕೊಂಡು ಬಂದು ನಮ್ಮ ಕೈಲಿ ವ್ಯಾಪಾರ ಮಾಡಿಕೊಂಡು ಹೋಗಬೇಕು ಅಂದರಂತೆ

ನೀನು ದುಡ್ಡು ಕೊಡಬೇಡ ನೀವು ಕೇಳಿದಂತೆ ವ್ಯಾಪಾರವ ಕೊಡುತ್ತೀವಿ ಎಂದರಂತೆ, ಇವರ ಮಾತು ಕೇಳಿ ನಾನು ಎಂಥಾ ಗುರು ಒಂದಿಗೆ ನಾ ಬಂದೇನಪ್ಪ ಎಂದರಂತೆ ಆಗ ರಾಚಪ್ಪಾಜಿಯವರು ಮೋಡಿಕಾರರ ಮಾತು ಕೇಳಿ ರಾಚಪ್ಪಾಜಿಯವರಿಗೆ ತುಂಬಾ ಅಂಜಿಕೆಯಾಗುತ್ತದೆ. ರಾಚಪ್ಪಾಜಿಯವರು ನನಗೆ ಹೆದರಬ್ಯಾಡ ಅನ್ನುವವರು ಒಬ್ಬರು ಇಲ್ಲ ಗುರುದೇವ ಇವತ್ತಿನ ದಿವಸದಲ್ಲಿ ಗುರುದೇವ ಈ ಮೋಡಿಕಾರರ ಕೈಗೆ ಬಂದು ಸೇರಿದ ನಾನು ಮಾತ್ರ ಗುರೂಗೆ ಮಗನಾಗಲಿಲ್ಲ ಈ ಮೋಡಿಯಾದ ನಾನು ಗೆದ್ದು ನಿಮ್ಮ ಬಳಿಗೆ ನಾನು ಬರುವುದಿಲ್ಲ ಗುರುದೇವ ಎನ್ನುತ್ತಾ ಧರೆಗೆ ದೊಡ್ಡವರ ಪಾದ ನೆನೆಯುತ್ತಾ ರಾಚಪ್ಪಾಜಿಯವರು ದುಃಖಿಸಿ ದುಃಖ ಪಡುತ್ತಿದ್ದರು. ಆಗ ಅಲ್ಲಿದ್ದ ಮೋಡಿಕಾರರು ಬೆಳ್ಳಿಯ ಪಾದರಕ್ಷೆ ಮೆಟ್ಟಿಕೊಂಡು ಸಮುದ್ರದ ಮೇಲೆ ಓಡಾಡಿಕೊಂಡು ಸಾಮಾನಿನ ಅಂಗಡಿ ಹಾಕುತ್ತಾರೆ ಆಗ ನಾವು ಓಡಿ ಬಂದ ಹಾಗೆ ನೀನು ಓಡೋಡಿ ಬರಬೇಕು ನೀನು ಘನ ವಿದ್ಯೆ ಸತ್ಯ ನನಗೆ ತೋರಲೇಬೇಕು ನಿನ್ನ ಗುರುವ ಮೈಮೆಯ ನಾವು ನೋಡಲೇಬೇಕು ನಿನಗೆ ವ್ಯಾಪಾರ ಕೊಡುತ್ತೇವೆ ಓಡು ಎನ್ನುತ್ತಾರೆ.

ರಾಚಪ್ಪಾಜಿಯವರು ಧರೆಗೆ ದೊಡ್ಡವರ ಪಾದ ನೆನೆಕೊಂಡು ಹಿರಿಯರ ಪಾದ ನೆನಕೊಂಡು ರಾಚಪ್ಪಾಜಿಯವರು ಬರುತ್ತೀನಿ ಕಣಣ್ಣ ಎಂದು ಹೇಳಿ ಧರೆಗೆ ದೊಡ್ಡಯ್ಯ ಕೆಟ್ಟರು ನಿನ್ನಿಂದ ಬದುಕಿದ್ರೂ ನಿನ್ನಿಂದ ಬಾಳಿದರೂ ನಿನ್ನಿಂದ ಸತ್ತರೆ ನೀರಿನಲ್ಲಿ ಸಾಯ್ತೀನಿ ಅಪ್ಪಾ ಬದುಕಿದರೆ ನಿನ್ನ ಬಳಿಗೆ ಬರುತ್ತೀನಿ ಅಂದ ಮಾತನ್ನು ಧರೆಗೆ ದೊಡ್ಡವರು ನಿದ್ರೆಯ ಒಳಗೆ ಕೇಳುತ್ತಾರೆ. ಆಗ ಧರೆಗೆ ದೊಡ್ಡವರು ರಾಪ್ಪಾಜಿಯವರಿಗೆ ಆಶೀರ್ವಾದ ಮಾಡುತ್ತಾರೆ. ಆಗ ರಾಚಪ್ಪಜಿವರಿಗೆ ಅಪ್ಪಣೆಯಾಗುತ್ತಾ ಅಂತಹೇಳಿ ಅವರು ಹರಿಯುವಂತ ನೀರ ಕಣ್ಣಾರೆ ನೋಡಿ ಅಯ್ಯಾ ಕಪ್ಪು ದೂಳ್ತ ಗುರುವೆ ತೆಗೆದಾರು ಆಗ ಹರಿಯುವಂತ ನದಿಯ ಮೇಲೆ ಉರುಬುತ್ತಾರೆ. ಆಗ ಹರಿಯುವಂತಹ ನದಿಯು ಬಿಟ್ಟು ಬಿಟ್ಟು ನನ್ನ ಗುರುವು ಓಡೋಡಿ ಬರುತ್ತಾರೆ ರಾಚಪ್ಪಾಜಿಯವರು ಈ ರೀತಿಯಾಗಿ ಮಾಡಿದಾಗ ಹರಿಯುವಂತಹ ನದಿಗೆ ಬಲದ ಪಾದ ಮಡಗುತ್ತಾರೆ. ಆಗ ಧರೆಗೆ ದೊಡ್ಡವರಿಗೆ ಎಳ್ಳಷ್ಟು ಹೊಟ್ಟೆ ಉರಿದು ಬಿಡುತ್ತದೆ. ಆಗ ರಾಚಪ್ಪಾಜಿಯವರು ಕಣ್ಣು ಮುಚ್ಕೊಂಡು ಬರುವಂಥವನನ ಕೈ ಬಿಡುವುದು ಸರಿಯಲ್ಲಿ ಅಂತೇಳಿ ಧರೆಗೆ ದೊಡ್ಡವರು ರಾಚಪ್ಪಾಜಿ ಕಣ್ಣಿಗೆ ಸಣ್ಣ ಮರಳು ಆಗೋಯ್ತು ಮೋಡಿಕಾರರ ಕಣ್ಣಿಗೆ ಹರಿವ ನದಿಯಾಗೋಯ್ತು ಆಗ ರಾಚಪ್ಪಾಜಿಯವರು ಮರಳಿನ ಮೇಲೆ ಗುಡುಗುಡನೆ ಬರುತ್ತಾರೆ ಆಗ ರಾಚಪ್ಪಾಜಿಯವರು ಸಮುದ್ರದ ಮೇಲೆ ನಡೆದುಕೊಂಡು ಹೋಗಿ ಮೋಡಿಕಾರರು ಮಾರುತ್ತಿದ್ದ ಸಾಮಾನುಗಳನ್ನು ತೆಗೆದು ಜೋಳಿಗೆಗೆ ಹಾಕಿಕೊಳ್ಳುತ್ತಾರೆ ಆದರೆ ಆ ಜೋಳಿಗೆ ಎಷ್ಟೇ ಸಾಮಾನು ಹಾಕಿದರೂ ತುಂಬುತ್ತಿರಲಿಲ್ಲ.

ಮೋಡಿಕಾರರ ಎಲ್ಲಾ ಸಾಮಾನು ತೆಗೆದುಕೊಂಡ ಮೇಲೆ ರಾಚಪ್ಪಾಜಿಯವರು ಅಣ್ಣಾ ನೀರಿನ ಮೇಲೆ ಹಾಸಿದ್ದ ಬಾಳೆ ಎಲೆಯನ್ನು ಇಲ್ಲೆ ಎತ್ಕೋಳ್ಳೋನೋ ಇಲ್ಲ ಬುಟ್ಟು ಬುಡೋನೋ ಎಂದು ಕೇಳಿದಾಗ ಆಗ ಮೋಡಿಗಾರರು ಆ ಸಾಮಾನು ಹೋದ ಮೇಲೆ ಹಾಳು ಬಾಳೆ ಎಲೆ ಯಾರಿಗೆ ಬೇಕು ತೆಗೆದುಕೊಂಡು ಹೋಗು ಎಂದು ಹೇಳುತ್ತಾರೆ. ಆಗ ರಾಚಪ್ಪಾಜಿಯವರು ಆ ಬಾಳೆ ಎಲೆಯನ್ನು ಜೋಳಿಗೆಯ ಒಂದು ಮೂಲೆಗೆ ತುರುಕುತ್ತಾರೆ. ಈ ರೀತಿಯಾಗಿ ಸಾಮಾನುಗಳನ್ನು ಜೋಳಿಗೆಗೆ ಹಾಕಿಕೊಂಡು ಸಮುದ್ರದ ಮೇಲೆ ನಡೆದುಕೊಂಡು ಬರುವಾಗ ಅವನ ಕಾಲಿಗೆ ನೀರು ಆಗಲಿಲ್ಲ ಬರೀ ಮಣ್ಣೆ ಆಗಿತ್ತಂತೆ ಆಗ ಮೋಡಿಕಾರರಿಗೆ ಬಹಳ ದುಃಖ ಆಗುತ್ತದೆ ಮತ್ತು ಗಳ ಗಳನೆ ಅಳುತ್ತಾರೆ. ರಾಚಪ್ಪಾಜಿಯವರು ಮೊಡಿಕಾರರಿಗೆ ಈ ಏಳಂಡಿ ಸಾಮಾನು ನನ್ನದಾಯ್ತು ಈಗ ನೀವೆಲ್ಲ ನೋಡುತ್ತಿದ್ದೀರಿ ನಾನು ಗುರು ಮಗ ಗೆದ್ದಿದ್ದೀನಿ ಎನ್ನುತ್ತಾರೆ. ಆಗ ರಾಚಪ್ಪಾಜಿಯವರು ಈಗಲಾದರು ನನ್ನ ಗುರು ಮಗ ಅಂತ ಕರೀರಪ್ಪ ಧರೆಗೆ ದೊಡ್ಡವರ ಶಿಷ್ಯ ಅಂತ ಕರೀರಪ್ಪ ಅಂದ್ರಂತೆ ಆಗ ಮೋಡಿಕಾರರು ರಾಚಪ್ಪಾಜಿಯವರನ್ನ ಛೇ ಮುಂಡೇ ಮಗನೆ ಧರೆಗೆ ದೊಡ್ಡವರ ಮಗ ಅಂತ ಹೇಳುತ್ತಿದ್ದೀಯಾ ಈ ದಿನ ನೀನು ಅಂಗಾಲ ನೀರು ಮಣ್ಣಾಗದೆ ಬಂದು ಬುಟ್ಟೆಯಲ್ಲೋ ರಾಚಪ್ಪಾಜಿ ನೀನು ಘನ ಮೋಡಿಗಾರ, ಒಂದು ಎರಡು ಮೋಡಿ ಕಲಿತಿಲ್ಲ ನೀನು ನೂರೊಂದು ಮೋಡಿ ಕಲಿತ್ತಿದ್ದೀಯಾ ನಿನ್ನ ಯಾವುದಾದರು ಒಂದು ಮೋಡಿಯಲ್ಲಿ ನಿನ್ನ ಸೋಲಿಸಲೇಬೇಕು ನಿನ್ನ ನಾವು ಗೆಲ್ಲಲೇಬೇಕು ಅಂದರಂತೆ.

ಮೋಡಿಗಾರರು ಇವನನ್ನೇ ಊರು ಬಿಟ್ಟ ಹೊರಗಡೆ ಕಳುಹಿಸಬ್ಯಾಡ್ರಿ ಅಂತ ಊರಿನ ಜನಕ್ಕೆ ಹೇಳುತ್ತಾರೆ. ಆಗ ರಾಚಪ್ಪಾಜಿಯವರು ಅಣ್ಣಾ ನಾನೊಂದು ಮೋಡಿ ಮಾಡುತ್ತೀನಿ ನನ್ನ ಮೋಡಿಯನ್ನ ನೀವು ಎತ್ತಿರಣ್ಣ ಅಂದರಂತೆ. ಆಗ ಮೋಡಿಕಾರರು ಅದೇನು ನಿನ್ನ ಮೋಡಿ ಆಟ ಮಾಡ್ತೀಯಾ ಅದನ್ನ ನಾವು ಗೆಲ್ಲುತ್ತೇವೆ ಅಂದರಂತೆ. ಆಗ ರಾಚಪ್ಪಾಜಿಯವರು ಇದು ನಮ್ಮ ಗುರು ಕೊಟ್ಟ ಜೋಳಿಗೆ ಈ ಜೋಳಿಗೆ ಒಳಗಡೆ ಇರತಕ್ಕದ್ದು ನಮ್ಮ ಗುರು ಕೊಟ್ಟ ಈ ಬತ್ತಿ ವಿಭೂತಿ ಪುಡಿ. ಇದು ಮಲೆಯಾಳದ ಕಪ್ಪು ಜಗಲೀ ಮ್ಯಾಲೆ ಮಡುಗುತ್ತೇನೆ ಕಣ್ರಪ್ಪ ಅಂದರಂತೆ ರಾಚಪ್ಪಾಜಿಯವರು ಆಗ ರಾಚಪ್ಪಾಜಿಯವರು ಮೊಡಿಕಾರರಿಗೆ ನಮ್ಮ ಗುರು ಕೊಟ್ಟ ಜೋಳಿಗೆಯನ್ನು ನೀವು ಎತ್ತಿ ಬುಡ್ರಣ್ಣ ಅಂದರಂತೆ ಆ ರೀತಿ ಹೇಳಿ ರಾಚಪ್ಪಾಜಿಯವರು ಧರೆಗೆ ದೊಡ್ಡವರಿಗೆ ಕೈಯೆತ್ತಿ ಮುಗಿದರಂತೆ. ಮತ್ತೆ ಅವರ ಪಾದವ ನೆನೆದುಕೊಂಡು ನನ್ನ ಗುರುಕೊಟ್ಟ ಜೋಳಿಗೆ ನೀವು ಎತ್ತಿರಪ್ಪ ಅಂದರಂತೆ ಆಗ ಮೋಡಿಕಾರರು ನೂರೊಂದು ಜನ, ನೂರೊಂದು ಒಕ್ಕಲು ಜನ ಎಲ್ಲರೂ ಸೇರಿಕೊಂಡು ರಾಚಪ್ಪಾಜಿಯವರ ಮುತ್ತಿನ ಜೋಳಿಗೆಯನ್ನು ಕಣ್ಣಾರೆ ನೋಡಿಕೊಂಡು ಅಲ್ಲಿದ್ದ ಮೋಡಿಕಾರರು ಈ ಗೇಣುದ್ದ ಜೋಳಿಗೆಯನ್ನು ನಾವೆತ್ತದೆ ಬುಟ್ಟೇವ ನಿವೇತ್ತುಬಿಡಿ ಅಣ್ಣಂದಿರೆ ಆಗೆಂದು ಹೇಳಿ ಬರುತ್ತಾರೆ. ಆದರೆ ಇದು ಭೂಮಿ ತೂಕದ ಜೋಳಿಗೆ ಎಂದೂ ಯಾರಿಗೂ ಸಿಕ್ಕುತ್ತಾಗಲಿಲ್ಲ. ಆದರೆ ಮೋಡಿಕಾರರು ಜೋಳಿಗೆಯನ್ನು ಎತ್ತಲು ಬಂದು ಅಲ್ಲಿಯೆ

ಪಕ್ಕನೆ ಪ್ರಾಣ ಬಿಡುತ್ತಾರೆ. ಆಗ ಇದು ಎಂತ ಮೋಡಿ ಆಟ ಅಂತ ಬಹಳ ದುಃಖ ಪಡುತ್ತಾರೆ.

ರಾಚಪ್ಪಾಜಿಯವರು ನೀವು ಬದುಕಬೇಕೆಂದರೆ ನಮ್ಮ ಗುರುಪಾದ ನೆನೆದುಕೊಂಡು ಬದುಕಿಕೊಳ್ಳಿ ಇಲ್ಲ ಸತ್ತುಹೋದರೆ ಗುರವೆ ನನ್ನ ಗುರುವಿನ ಪಾದನೆನೆದುಕೊಂಡು ಪ್ರಾಣ ಬಿಡಿ ಅಂದರಂತೆ. ಆಗ ಜೋಳಿಗೆ ಮುಟಿದವರೆಲ್ಲ ಪ್ರಾಣ ಬಿಡುತ್ತಾರೆ. ಈ ರೀತಿಯಾಗಿ ಎಲ್ಲರೂ ಸತ್ತ ಹೋದ ಮೇಲೆ ಧರೆಗೆ ದೊಡ್ಡವರು ನಿದ್ರೆಯಿಂದ ಮೇಲಕ್ಕೆ ಹೇಳುತ್ತಾರೆ ಆಗ ರಾಚಪ್ಪಾಜಿಯವರು ಸತ್ತುಹೋಗಿರುವ ಮೋಡಿಕಾರರನ್ನು ಎಚ್ಚರಗೊಳಿಸಿ ಇವರತ್ರ ನಮ್ಮ ಗುರುಗೆ ಒಬ್ಬ ಮಗಳ ಪಡೆದುಕೊಂಡು ಹೋಗಿ ಗುರುವಿನ ಪಾದಕ್ಕೆ ಒಪ್ಪಿಸಬೇಕು ಅಂದರಂತೆ ಆಗ ರಾಚಪ್ಪಾಜಿಯವರು ಕಪ್ಪು ದೂಳ್ತ ತೆಗೆದರಂತೆ ಅವರ ಮೈಮೇಲೆ ಉರುಬುತ್ತಾರೆ. ಆಗ ಸತ್ತು ಹೋಗಿದ್ದ ಮೋಡಿಕಾರರೆಲ್ಲ ಮೇಲೆಕೆದ್ದು ರಾಚಪ್ಪಾಜಿಯವರ ಮುಖವನ್ನು ಕಣ್ಣಿಂದ ನೋಡುತ್ತಾರೆ ಆಗ ರಾಚಪ್ಪಾಜಿಯವರು ನಮ್ಮ ಗುರುವಿನ ಮಹಿಮೆ, ನಮ್ಮ ಗುರುವಿನ ಶಾಪ ಈಗ ನಿಮಗೆ ಗೊತ್ತಾಯಿತ್ರಪ್ಪ ಎನ್ನುತ್ತಾರೆ. ಮೋಡಿಕಾರರು ರಾಚಪ್ಪಾಜಿಯವರಿಗೆ ನಿಮ್ಮ ಗುರುಗಳ ಮಹಿಮೆ ಕಂಡಂಗಾಯ್ತು ಅಪ್ಪಾ ನಿಮ್ಮ ಮಹಿಮೆ ತಿಳಿದಂಗಾಯ್ತು ಈಗ ನಾವು ನಿಮ್ಮ ಗುರುವಿಗೆ ಶಿಷ್ಯರಾಗುತ್ತೇವೆ. ಮಕ್ಕಳಾಗುತ್ತೇವೆ. ಅಂದರಂತೆ ಆಗ ರಾಚಪ್ಪಾಜಿಯವರು ನಮ್ಮ ಗುರುವಿನ ಬಳಿಗೆ ನಿಮ್ಮ ಮಠ ಮನೆಯಿಂದ ನಾವು ಹಾಗೆ ಓಡಿಹೋಗೋಕೆ ಆಗುವುದಿಲ್ಲ. ನಮಗೆ ಗುರುವಿಗೆ ಬೇಕಾದಂಥ ಭಿಕ್ಷೆ ಕೊಟ್ಟುಬಿಡಿ ನಾವು ಹೊರಟುಹೋಗುತ್ತೇವೆ ಎನ್ನುತ್ತಾರೆ. ಮೋಡಿಕಾರರು ಗುರುದೇವಾ ತಾಯಿ–ತಂದೆ, ಅಣ್ಣ ತಮ್ಮ ಬಂಧು–ಬಳಗ ಯಾಕೆಂದ್ರೆ ಯಾರು ಇಲ್ಲ ಆ ಗುರುದೇವ ಯಾರು ಇರದಿದ್ದ ಮಗಳು ನಿಮಗೆ ಶಿಶು ಮಗಳಾಗಿ ಮಾಡುತ್ತೀವಿ ಸ್ವಾಮಿ ಅಂದರಂತೆ ಆಗ ಮೋಡಿಗಾರರು ಚೆನ್ನಾಜಮ್ಮನನ್ನು ಕರಕೊಂಡು ಅವರು ರಾಚಪ್ಪಾಜಿ ಜೊತೆಗೆ ಮಗಳಾಗಿ ಕಳುಹಿಸಿಕೊಡುತ್ತಾರೆ. ಚೆನ್ನಾಜಮ್ಮನವರು ರಾಚಪ್ಪಾಜಿಯವರ ಪಾದಕೆ ಬಾಗಿ ಶರಣು ಮಾಡುತ್ತಾಳೆ. ಈ ರೀತಿಯಾಗಿ ರಾಚಪ್ಪಾಜಿಯವರು ಮೋಡಿಕಾರರನ್ನು ಸೋಲಿಸಿ ಚೆನ್ನಮ್ಮನನ್ನು ಶಿಶು ಮಗಳಾಗಿ ಮಾಡಿಕೊಂಡು ವಿಜಯನಗರ ಬಿಟ್ಟು ಬರುವಾಗ ರಾಚಪ್ಪಾಜಿಯವರು ಕೇಳಿರಣ್ಣ ಮೋಡಿಗಾರರೆ ನೀವು ಸುಳ್ಳು ಹೇಳಿ ಬಾಳಿ ಬದುಕಬೇಕೆಂದರೂ ಕೂಡ ನಿಮ್ಮ ಬಾಯಲ್ಲಿ ಆಡುವ ಮಾತು ನಿಜವಾಗಿ ಬರಲಪ್ಪ ಅಂತ ಶಾಪ್ಪ ಕೊಟ್ಟರಂತೆ ಧರೆಗೆ ದೊಡ್ಡವರ ಬಳಿಗೆ ಓಡಿ–ಓಡಿ ಬರುತ್ತಾರೆ. ಆಗ ಬಂದ ಗಳಿಗೆಯಲ್ಲಿ ಗುರುವಿನ ಪಾದಕೆ ಗುರುವೆ ಬಗ್ಗೆ ಶರಣು ಮಾಡುತ್ತಾರೆ. ಆಗ ಮೇಲೆದ್ದು ನೋಡಿದ ಧರೆಗೆ ದೊಡ್ಡವರು ಈ ಮಗಳು ಯಾಕಪ್ಪಾ ಕಂದಾ ಎಂದರಂತೆ. ಆಗ ರಾಚಪ್ಪಾಜಿಯವರು ತೆಂಕಲ ಸೀಮೆಯಲ್ಲಿ ಇದ್ದ ಮೋಡಿಕಾರರನ್ನ ಸೋಲಿಸಿ ಗುರುವೆ ನಿಮ್ಮ ಪಾದ ಪೂಜೆ ಮಾಡೊಕೊಬ್ಬಳು ಶಿಶು ಮಗಳ ಪಡೆದು ತಂದಿದ್ದೇನೆ ಗುರುದೇವ ಅನ್ನುತ್ತಾರೆ.

ರಾಚಪ್ಪಾಜಿಯವರಿಗೆ ಧರೆಗೆ ದೊಡ್ಡವರು ಅಪ್ಪಾ ಕಂದಾ ಈ ಗುರು ಕೊಟ್ಟ ಮಾತಿಗೆ ತಪ್ಪಿ ನಡೆಯಬೇಡ ಈ ಗುರು ಕೊಟ್ಟ ಒಡತನಕ್ಕೆ ಮೀರ ನಡೆಯಬೇಡ ನಾವು ಕೊಟ್ಟರೆ ವರ, ಇಟ್ಟರೆ ಶಾಪವಯ್ಯಾ ಅಂದರಂತೆ ರಾಚಪ್ಪಾಜಿಯವರು ನಾನು ನಿಮ್ಮ ಮಾತು ಮೀರಿ ಎಲ್ಲಿಗೂ ಹೋಗುವುದಿಲ್ಲ ಗುರುದೇವಾ ಅಂತಹೇಳಿ ಗುರುವಿನ ಪಾದಕೆ ಶರಣು ಮಾಡುತ್ತಾರೆ ಈ ರೀತಿಯಾಗಿ ರಾಚಪ್ಪಾಜಿಯವರ ಪವಾಡ ನಡೆಯುತ್ತದೆ. ಮಂಟೇಸ್ವಾಮಿಯವರು ಶಿಶು ಮಕ್ಕಳನ್ನು ಪಡೆದುಕೊಂಡು ಈಗ ನಾನು ಎಲ್ಲಿಗೆ ಹೋಗಬೇಕು ಅಂತ ಚಿಂತೆಯಲ್ಲಿ ಮುಳುಗುತ್ತಾರೆ. ಆಗ ಚಿಂತೆಯಲ್ಲಿಯೇ ಅವರು ತಮ್ಮ ದೃಷ್ಟಿ ಒಳಗೆಯೆ ನೋಡುತ್ತಾರೆ ಆಗ ಮಂಟೇಸ್ವಾಮಿಯವರು ಈ ಭೂಮಿ ಪಡೆದು ಭೂಲೋಕವನ್ನೇ ಪಡೆದು ಸೂರ್ಯ–ಚಂದ್ರಾದಿಗಳನ್ನು ಪಡೆದು, ವಿಷ್ಣು, ಈಶ್ವರ, ಬ್ರಹ್ಮ ತ್ರಿಮೂರ್ತಿ ಕಲ್ಯಾಣ ಪಟ್ಟಣವನ್ನೆಲ್ಲಾ ಆಳಿ ಬಾಳಿ ಬಂದನಲ್ಲಾ ಈಗ ನನಗೆ ಪವಿತ್ರವಾದಂತ ಸ್ಥಳವಾಗಬೇಕು, ನಾಲ್ಕು ರಾಜ್ಯಕ್ಕೂ ಒಪ್ಪಿದಂತೆ ಭೂಮಿಯಾಗಬೇಕು ಆ ಸ್ಥಳ ಎಲ್ಲಿ ದೊರಕುವುದೋ ಕಾಣೆ ಅಂತೇಳಿ ಅವರು, ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ದಿಕ್ಕುಗಳನ್ನು ಮತ್ತು ನಾಲ್ಕು ಮೂಲೆ ಎಂಟು ದಿಕ್ಕುಗಳನ್ನು ಕಣ್ಣಾರೆ ನೋಡತ್ತಾರೆ ಆಗ ಅವರಿಗೆ ಮಳವಳ್ಳಿ ತಾಲ್ಲೂಕು, ಮಾರೇಹಳ್ಳಿ ಗ್ರಾಮ ಕುರುಬಗೌಡರ ಹಟ್ಟಿ ಹೆಗಡೆ ಗೌಡರ ಮನೆ, ಹಾಲು ಮತಸ್ಥಗೌಡ, ಈ ಬೊಪ್ಪೇಗೌಡನ ದೊಡ್ಡ ನಾಳೆ ಬೋಗೌಡನ ಪುರವ ಮಾಡಿ ಈ ಒಟ್ಟು ದೊಡ್ಡಿಯಲ್ಲಿ ಕುರಿ ಕೊಡುವ ಮನೆ ನನಗೆ ಮಠ ಮನೆ ಆಗಬೇಕು ಮತ್ತು ನಡುವೆ ತೋಪಾಗಬೇಕು ಮಠದ ಮುಂದೆ ಸ್ನಾನದ ಬಾವಿಯಾಗಬೇಕು ಅಂತಹೇಳಿ ಮಡಿವಾಳ ಮಾಚಪ್ಪನ ಬಟ್ಟೆ ಬೇಯಿಸುವ ಒಲೆಯನ್ನು ನಾನು ಉರಿಗದ್ದಿಗೆ ಮಾಡಬೇಕು, ಮಾತ್ರ ಚೌಳುಮಣ್ಣು ತುಂಬುವ ಮನೆ ನನಗೆ ಉಗ್ರಾಣ ಆಗಬೇಕು ಎನ್ನುತ್ತಾ ಆಗ ಮಂಟೇಸ್ವಾಮಿಯವರು ಬೊಪೇಗೌಡನ ಪುರಕ್ಕೆ ಹೋಗಬೇಕು ಎನ್ನುತ್ತಾರೆ.

ಮಂಟೇಸ್ವಾಮಿಯವರು ಬೊಪ್ಪೇಗೌಡನ ಪುರದಲ್ಲಿ ವಸ್ತುಲ ಮನೆ ಮಾಡಿಕೊಂಡು ಮಾಚಪ್ಪನಾ ಬಟ್ಟೆ ಬೇಯುವಂತ ಬಟ್ಟೆ ಬೇಯುವ ಒಲೆ ನನಗೆ ಉರಿಗದ್ದಿಗೆಯಾಗಬೇಕು, ಬೊಪ್ಪೇಗೌಡನ ದೊಡ್ಡಿಯು, ರಾಜಬೊಪ್ಪನ ಗೌಡನಪುರ ಎಂದು ನಾಮಕರಣ ಕಟ್ಟಬೇಕು ಅಂತ ಹೇಳಿ ಈಗ ನಾನು ಹೆಗ್ಗಡೆ ಗೌಡ್ರು ಮನೆಗೆ ನಾನು ಹೋಗಬೇಕೆಂದರೆ ಬೆಳಿಗ್ಗೆ ಕಾಲದಲ್ಲಿ ಹೊರಟುಹೋಗಿಬಿಟ್ರೆ ಯಾರೋ ಸಂನ್ಯಾಸಿ ಬಂದು ದಾನ ಧರ್ಮ ಕೇಳುತ್ತಾನೆ ಅಂತೇಳಿ ಜೋಳಿಗೆ ಭಿಕ್ಷೆ ಹಾಕಿ ಪಾದಕೆ ಶರಣು ಮಾಡಿ ಹೋಗಿದ್ದು ಬನ್ನಿ ಸ್ವಾಮಿ ಅಂತ ಕಳುಹಿಸಿಬಿಡುತ್ತಾರೆ. ಮಟ–ಮಟ ಮಧ್ಯಾಹ್ನ ಹೊರಟು ಹೋಗಿಬಿಡ್ರಿ ಯಾರೋ ಸಂನ್ಯಾಸಿಗಳು ನಮ್ಮ ಮನೆಗೆ ಬಂದಿದ್ದಾರೆ. ಊಟ ಮಾಡಿ ಅಂತ ಹೇಳಿ ಜಂಗಮರ ಪಾದಕೆ ನೀರು ಕೊಟ್ಟು ಕರೆದು ಊಟ ಬಡಿಸಿ ಊಟ ಮಾಡಿಸಿ ಮುಂದಕೆ ಕಳುಹಿಸು ಅಂತಾ ಹೇಳಿ ಮಡದಿ ಮಕ್ಕಳೆಲ್ಲ ಅಪ್ಪಣೆ ಮಾಡಿ ಬಿಡುತ್ತಾರೆ ಊಟ ಮಾಡಿ ವೀಳ್ಯ ತೆಗೆದುಕೊಂಡು ನಾನು ಹೊರಟು

ಹೋಗಬೇಕಾಗುತ್ತದೆ. ನಾನು ಸಾಯಂಕಾಲ ಅಂದರೆ ಸೂರ್ಯ ಮುಳುಗುವ ಸಮಯದಲ್ಲಿ ನಾನು ಹೊರಟು ಹೋಗಿ ಬಿಟ್ರೆ ಈ ಬೊಪ್ಪೇಗೌಡನ ಪುರ ಮಠ ಮನೆ ಆಗುತ್ತದೆ ಎಂದು ಮಂಟೇಸ್ವಾಮಿಯವರು ಮಟ್ಟ ಮಂಗಳವಾರ, ಶುದ್ಧ ಶುಕ್ರವಾರ, ತುಂಬಿದ ಸೋಮವಾರ ಧರೆಗೆ ದೊಡ್ಡವರು ಬೊಪ್ಪೇಗೌಡನ ಪುರದ ಮನೆಗೆ ಆಗಮಿಸುತ್ತಾರೆ ಬರುವಾಗ ಹೊತ್ತು ಮುಳುಗಿತ್ತು ಒಬ್ಬರ ಮುಖ ಒಬ್ಬರಿಗೆ ಕಾಣಿಸುವುದಿಲ್ಲ ಆ ಸಮಯದಲ್ಲಿ ಧರೆಗೆ ದೊಡ್ಡವರು ದಯಮಾಡುತ್ತಾರೆ. ಆಗ ಬರುವಾಗ ಧರೆಗೆ ದೊಡ್ಡವರು ಕಂಡಾಯ ಜ್ಯೋತಿ ಅವರು ಕೈಲಿ ತೆಗೆದುಕೊಂಡು ಹೆಗಲ ಮೇಲೆ ಒತ್ತುಕೊಂಡು ಬೊಪ್ಪೇಗೌಡನ ಪುರದ ಮನೆಗೆ ದಯಮಾಡುತ್ತಾರೆ. ಬೊಪ್ಪೇಗೌಡ ಅನ್ನುವವರು ಕುರಿ ಮೇಯಿಸಿಕೊಂಡು ಕುರಿ ದೊಣ್ಣೆ ತಂದು ಮೂಲೆಯಲ್ಲಿ ಇದ್ದು ಕರಿಕಂಬಳಿ ತೆಗೆದು ಹಜಾರದಲ್ಲಿ ಹಾಕಿಬುಟ್ಟು ಆಳುದ್ದ ಜಗಲಿ ಮೇಲೆ ಕುಳಿತ್ತಿದ್ದಾರೆ. ಮಂಟೇಸ್ವಾಮಿ ಬಂದವರು ಬೊಪ್ಪೇಗೌಡನ ಮುಖವ ಕಣ್ಣಾರೆ ನೋಡುತ್ತಾರೆ ಆಗ ಬೊಪ್ಪೇಗೌಡರು ಅಡಿಕೆ ಎಲೆ ತೆಗೆದು ಅಡಿಕೆ ಕುಟ್ಟಿ ಪುಡಿ ಮಾಡುವ ಸಾಧನ ತೆಗೆದುಕೊಂಡು ಅದರ ಒಳಗಡೆ ಹಾಕಿ ಕುಟ್ಟುತ್ತಾ ಕುಳಿತಿದ್ದ ಬೊಪ್ಪೇಗೌಡನನ್ನ ಕಣ್ಣಾರೆ ಕಂಡು ಏನಪ್ಪ ಗೌಡರೆ ಗುರುವೆ ದಾನ ಕೊಡಿ ಭಿಕ್ಷೆ ಕೊಡಿ ಕಂದಾ ಎಂದರಂತೆ. ದಾನ ಕೊಟ್ಟವರಿಗೆ ಜೋಳಿಗೆ ಚಿನ್ನ ಆಗಲಯ್ಯ ಅಂತ ಹೇಳಿ ಭಿಕ್ಷೆ ಕೊಟ್ಟವರಿಗೆ ಭಾಗ್ಯ ಬರಲಿ ಎಂದು ಹೇಳುತ್ತಾ ದಾನ ನೀಡಿರಪ್ಪ ಧರ್ಮ ನೀತಿ ಭಿಕ್ಷೆ ನೀಡಿ ಅಂದಾಗ ಬೊಪ್ಪೇಗೌಡ ಅವರನ್ನ ಕಣ್ಣಾರೆ ನೋಡಿ ಏನಯ್ಯ ಭಿಕ್ಷುಕ ಹೊತ್ತು ಬಿದ್ದ ಕತ್ತಲಾಗುತ್ತಿದೆ. ಬೆಳಿಗ್ಗೆ ಹೊತ್ತು ಬಂದಿರದೆ ಭಿಕ್ಷೆಕೊಟ್ಟು ಕಳುಹಿಸಬಹುದಿತ್ತು ಮಟ-ಮಟ ಮಧ್ಯಾಹ್ನ ಬಂದಿದ್ದರೆ ಅನ್ನ ಕೊಟ್ಟು ಕಳುಹಿಸಬಹುದಿತ್ತು ಈಗ ಬಂದು ದಾನಕೊಡು ಅಂತ ಕೇಳುತ್ತಿದ್ದೆಯಲ್ಲಾ ಇಷ್ಟು ಹೊತ್ತಿನಲ್ಲಿ ಏನು ನಿನಗೆ ದಾನ ಕೊಡಬೇಕು ಅಂತ ಹೇಳುತ್ತಾರೆ. ಮಂಟೇಸ್ವಮಿಯವರು ನನಗೆ ಅರವತ್ತು ವರುಷ ಕಳೆದೊಯ್ತು ನಾನು ಮುಂದಕೆ ಪ್ರಯಾಣ ಮಾಡಲು ಆಗುತ್ತಿಲ್ಲಾ ಕಣ್ಣುಗಳೆರಡು ಕಾಣುತ್ತಿಲ್ಲಾ ಈಗ ನಾನು ನಡೆದು ನಡೆದು ಪಾದಗಳೆಲ್ಲ ನೊಂದು ಹೋಗಿದ್ದಾವೆ, ನನಗೆ ದಾನ-ಧರ್ಮ ಭಿಕ್ಷೆ ಕೊಡಬೇಡಿ ನಿಮ್ಮ ಆಳುದ್ದ ಜಗುಲಿ ಮೇಲೆ ನನ್ನ ಖಂಡಾಯ ಇಡಲು ಜಾಗಕೊಡಿ ಅಂತ ಕೇಳುತ್ತಾರೆ. ಬೊಪ್ಪೇಗೌಡನಿಗೆ ಸಿಟ್ಟು ಬಂದು ಏನಯ್ಯಾ ಜಂಗಮ ಅಟ್ಟಿಯನ್ನು ದೊಡ್ಡದಾಗಿ ಕಟ್ಟಿಸವರೇ ಜಗಲಿ ಎತ್ತರವಾಗಿ ಕಟ್ಟಿಸುವರೇ ಅಂತಹೇಳಿ ಈ ಗೌಡನ ಮನೆಗೆ ಹೋಗು ಅಂತ ಯಾವ ಮುಂಡೆ ಮಕ್ಕಳು ನನ್ನ ಮನೆಗೆ ದಾರಿ ತೋರಿಸಿಕೊಟ್ಟರು ಅಂತೇಳಿ ಬೊಪ್ಪೇಗೌಡ ನಿಮ್ಮಂತ ಪರದೇಶಿ, ದಾಸಯ್ಯ, ಜೋಗಯ್ಯ, ಗುಡ್ಡಯ್ಯ, ಗೊರವಯ್ಯ ಇಂತಹ ಸಂನ್ಯಾಸಿಗಳಿಗಳೆಲ್ಲ ನನ್ನ ಮನೆಗೆ ಬರುತ್ತಾರೆ. ಈ ಸಂನ್ಯಾಸಿಗಳಿಗೆಲ್ಲ ಭಿಕ್ಷೆಗೆ ಬರುತ್ತಾರೆ, ಬಂದು ಬಂದವರಿಗೆಲ್ಲ ನಮ್ಮ ಮನೆಯಲ್ಲಿ ಇರತಕ್ಕಂತಹ ಅಕ್ಕಿ, ಬೇಳೆ ಕೊಟ್ಟು ಬೆಳಿಗ್ಗೆ ಕಾಲದಲಿ ಕಳುಹಿಸಿಬಿಡುತ್ತೇವೆ ಮಟ ಮಧ್ಯಾಹ್ನ ಬಂದರೆ ಕೈಗೆ ನೀರು ಕೊಟ್ಟು ಹೊಟ್ಟೆ ತುಂಬ ಊಟ ಮಾಡಿ ಹೋಗಿದ್ದು ಬನ್ನಿ ಜಂಗಮರೆ ಅಂತ ಹೇಳಿ ಮನೆಯಿಂದ ಹೊರಗೆ

ಕಳುಹಿಸ ಬಿಡ್ತೀವಿ ಸಂಜೆ ಹೊತ್ತು ಬಂದವರನ್ನ ಖಂಡಿತವಾಗಿ ಮನೆಗೆ ಸೇರಿಸೋದಿಲ್ಲ ಅನ್ನುತ್ತಾರೆ. ಈ ರೀತಿ ನೀನು ಸಾಯಂಕಾಲ ಬಂದಿದ್ದರಿಂದ ನಿನಗೆ ಖಂಡಾಯ ಇಟ್ಟುಕೊಳ್ಳಲು ಜಾಗವಿಲ್ಲ ಆದುದರಿಂದ ನೀನು ಬೇರೆಯವರ ಮನೆಗೆ ಹೊರಟು ಹೋಗು ಎನ್ನುತ್ತಾರೆ. ಮಂಟೇಸ್ವಾಮಿಯವರು ಬೊಪ್ಪೇಗೌಡರೇ ನಿಮ್ಮ ಅಟ್ಟ ಮುಂಭಾಗದಲ್ಲಿ ಇರತಕ್ಕಂತಾ ಈ ಮಾಳದಲ್ಲಿ ಬಿದ್ದಿದ್ದು ಬೆಳಿಗ್ಗೆ ತುಂಬಿಸಿಕೊಂಡು ಹೊರಟು ಹೋಗುತ್ತೇನೆ. ಹಾದಿ ಬೀದಿಯಲ್ಲಿ ನಮ್ಮ ಬಿರುದು ಖಂಡಾಯ ಮಡಗಬಾರದು, ಶುದ್ಧವಾದ ಜಾಗದಲ್ಲಿ ಇಡಬೇಕು ಆದ್ದರಿಂದ ನಾನು ಈ ಜಾಗವನ್ನ ಕೇಳುತ್ತಿದ್ದೇನೆ ಅಂಗೈ ಅಗಲ ಜಾಗ ಕೊಡು ಎಂದರಂತೆ ನೀನು ನನ್ನ ಖಂಡಾಯಕ್ಕೆ ಜಾಗ ಕೊಟ್ಟರೆ ನಿಮಗೆ ಬಹಳ ಧರ್ಮ ಬರುತ್ತದೆ ಎನ್ನುತ್ತಾರೆ. ಆಗ ಬೊಪ್ಪೇಗೌಡ ನಿಮ್ಮಂತ ಭಿಕ್ಷುಕರಿಗೆ ಜಾಗ ಕೊಟ್ಟುಬಿಟ್ರೆ, ನಾನೇ ಬರಲಿ, ನನ್ನ ಮಕ್ಕಳೇ ಬರಲಿ, ನನ್ನ ಸೊಸೆ ಮಡದಿ ಬರಲಿ ಗೌಡ್ರು ಮಕ್ಕಳು ಬರುತ್ತಾರೆ ಅಂತಹೇಳಿ ಜಗಲಿ ಏನಾದರೂ ಕೊಟ್ಟರೆ, ನೀವು ನೀಡಿರುವ ಕಾಲನ್ನು ತೆಗೆಯುವುದಿಲ್ಲ, ಮುಚ್ಚಿದ ಕಣ್ಣು ಬಿಡುವುದಿಲ್ಲ, ನೀವು ಕೋಳಿ ಕೂಗಿ ಬೆಳಕಾದ್ರು ಸರಿಯೆ ನೀವು ಮಲಗಿದ್ದು ಮೇಲಕ್ಕೆ ಏಳುವುದಿಲ್ಲ ಅಂದರಂತೆ ನನ್ನ ಮನೆಯಲ್ಲಿ ಆರು ಸಾವಿರ ಕುರ್ದುಗುರಿ, ಆರು ಸಾವಿರ ಜೋಲು ಗುರಿ, ಆರು ಸಾವಿರ ಕರಿ ಕುರಿ, ಹದಿನೆಂಟು ಸಾವಿರ ಕುರಿಗಳು ಒಂದೇ ಮನೆ ಒಳಗಡೆ ಕೂಡಿಹಾಕಿದ್ದೇನೆ ಆ ಹದಿನೆಂಟು ಸಾವಿರ ಕುರಿಗಳ ಮಧ್ಯದಲ್ಲಿ ನೀನು ಒಬ್ಬ ಕುರಿಯಾಗಿ ಆ ಮೂಲೆಯಲ್ಲಿ ಬಿದ್ದಿದ್ದು ಕೆಡದಿದ್ದು, ನೀನು ಬೆಳಗಾದ ಮೇಲೆ ಎದ್ದು ಹೋಗು ಅಂತ ಹೇಳುತ್ತಾನೆ. ಆಗ ಧರೆಗೆ ದೊಡ್ಡವರು ಆಗಲಿ ನನ್ನಪ್ಪ ಬೊಪ್ಪೇಗೌಡ ನಿಮ್ಮ ಜಗಲಿ ಆದರೇನು ಕುರಿಕೊಟ್ಟಿಗೆ ಆದರೇನು ಅಲ್ಲೆ ಮಲಗಿದ್ದು ಬೆಳಗಾದ ಮೇಲೆ ಎದ್ದು ಹೋಗುತ್ತೇನೆ ನಿನ್ನ ಮನೆಯಲ್ಲಿರುವ ಹಸುಗಳು ಹಾಲನ್ನು ಚೆನ್ನಾಗಿ ಕರೆಯಲಿ ಬಿತ್ತಿದ ಬೆಳೆ ಬೆಳೆಯಲಿ. ನೀನು ಒಂದು ಕುರಿ ಹಿಡಿದರೆ ಒಂಬತ್ತು ಕುರಿ ಆಗಲಪ್ಪಾ ಎಂದೂ ಹೇಳುತ್ತಾರೆ. ಈ ರೀತಿ ಹೇಳು ಅವರು ಆಳುದ್ದ ಅಟ್ಟ ಜಗಲಿನೇ ಬಿಟ್ಟು ಬಿಟ್ಟು ಆ ಕುರಿಮನೆ ನನಗೆ ಪವಿತ್ರವಾದ ಮನೆ ಅಂತೇಳಿ ಆಗ ಸ್ವಾಮಿ ಧರೆಗೆ ದೊಡ್ಡವರು ಕುರಿ ಕೊಟ್ಟಿಗೆಗೆ ದಯಾಮಾಡಿಸುತ್ತಾರೆ. ಧರೆಗೆ ದೊಡ್ಡವರು ಕುರಿಕೊಟ್ಟಿಗೆಯ ಒಳಗಡೆ ಹೋದಾಗ ನನಗೆ ಸಂಪದ್ಭರಿತವಾದ ಮನೆ ಸಿಕ್ಕಿಬಿಡ್ತು ಅಂತಹೇಳಿ ನನಗೆ ಕುರಿ ಕೂಡಿರುವ ಮನೆಯೇ ಪವಿತ್ರವಾದ ಮನೆ ಎನ್ನುತ್ತಾ ಧರೆಗೆ ದೊಡ್ಡವರು ಆ ಕುರಿ ಕೊಟ್ಟಿಗೆಯನ್ನು ಹನ್ನೆರಡು ವರುಷದಿಂದ ಕುರಿ ಕಸ ತೆಗೆದಿಲ್ಲಾ ಕಸದ ಪೊರಕೆಯನ್ನೇ ಮನೆಗೆ ಪ್ರವೇಶ ಮಾಡಿಲ್ಲ ಮಂಡಿ ಉದ್ದ ಕುರಿ ಕಸ ಬಿದ್ದತ್ತಂತೆ ಇಂತಹ ಕುರಿ ಕಸದ ಮಂಡಿ ಉದ್ದ ಬಿದ್ದಿರುವುದನ್ನ ಕಣ್ಣಾರೆ ನೋಡಿ ಶಬ್ಬಾಸ್ ಬೊಪ್ಪೇಗೌಡ ನನಗೆ ಒಳ್ಳೆ ದಾರಿ ಒಳ್ಳೆ ಮನೆಯನ್ನೆ ಕೊಟ್ಟಿದ್ದೀಯಾ ಅಂತೇಳಿ ಸಂತೋಷ ಪಡುತ್ತಾ ಆಗ ಬೊಪ್ಪೇಗೌಡರ ಹಿರಿಯ ಮಗ ಕುರಿ ಕೊಟ್ಟಿಗೆ ಬೀಗ ತೆಗೆದುಕೊಂಡು ಬಂದು ಬೀಗ ತೆಗೆದು ಬುಟ್ಟು ಈ ಕುರಿ ಕೊಟ್ಟಗೇಲಿ ಯಾವುದಾದರೂ ಒಂದು ಮೂಲೆಯಲ್ಲಿ ಜಾಗ ಮಾಡಿಕೊಂಡು ಮಲಗಿದ್ದು ಬೆಳಗಾಗುವುದಕ್ಕೆ ಮೊದಲು ಎದ್ದು ಹೋಗು ಅಂತೇಳಿ

ಒಳಗಡೆ ಮಂಟೇಸ್ವಾಮಿಯನ್ನ ಬಿಟ್ಟು ಹೊರಗಡೆ ಬೀಗ ಹಾಕಿಕೊಂಡು ಹೋದನಂತೆ. ಆಗ ಒಳಗಡೆ ಹೋಗಿ ನೋಡಿದಾಗ ಹದಿನೆಂಟು ಸಾವಿರ ಕುರಿಗಳೆಲ್ಲ ಒಂದರ ತಲೆಯ ಮೇಲೆ ಮತ್ತೊಂದು ತಲೆಯನ್ನು ಹಾಕಿಕೊಂಡು ಮಲಗಿದ್ದಾವೆ. ಆದರೆ ಅಲ್ಲಿ ಅಂಗೈ ಅಗಲ ಜಾಗ ಇಲ್ಲ ಆಗ ಧರೆಗೆ ದೊಡ್ಡವರು ಒಂದು ಮೂಲೆಗೆ ಬಂದು ಆ ಮೂಲೆ ಜಾಗ ನನಗೆ ಪವಿತ್ರವಾದಂತ ಜಾಗ. ನಾಲ್ಕು ರಾಜ್ಯಕ್ಕು ಸಮಾನವಾದಂತ ಭೂಮಿ ಎಂದು ಹೇಳಿ ಮಲಗಿದ್ದ ಕುರಿಗಳ ತೆಗೆದು ಆ ಕಡೆ ಈ ಕಡೆ ಮಲಗಿಸಿ ಬುಟ್ಟು ಹುಲಿಯ ಚರ್ಮವನ್ನ ಹಾಸಿದರು, ವಿಭೂತಿಯನ್ನ ಹರಡಿದರು ಮತ್ತು ಭಾರಿ ಖಂಡಾಯವನ್ನು ಜಡಿದು ಭೂಮಿ ಮೇಲೆ ಇಡುತ್ತಾರೆ.

ಮಂಟೇಸ್ವಾಮಿಯವರು ಹುಲಿಯ ಚರ್ಮವನ್ನ ಹಾಸಿಕೊಂಡು, ಜಿಂಕೆ ಚರ್ಮವನ್ನ ಹೊದ್ದುಕೊಂಡು ಭಾರಿ ಖಂಡಾಯ ತೆಗೆದು ಭೂಮಿಗೆ ಹಾಕಿ ಧ್ಯಾನದ ದಿಕ್ಕನ್ನ ಕಾಲದ ಧ್ಯಾನದ ಬುಕ್ಕನ್ನು, ತಾಮ್ರದ ಶಾಸನಗಳನ್ನು ತೊಡೆ ಮೇಲೆ ಇಟ್ಟುಕೊಂಡು ಅವರು ಕಾಲು ನೀಡಿಕೊಂಡು ಮಲಗುತ್ತಾರೆ. ಧರೆಗೆ ದೊಡ್ಡವರು ಪಾದ ನೀಡಿಕೊಂಡು ಬಲ ಮಗ್ಗುಲಲ್ಲಿ ಮಲಗಿದ್ದರಂತೆ. ಆಗ ಇನ್ನೂ ಕೋಳಿ ಕೂಗಲಿಲ್ಲ ಬೆಳಗಾಗಲಿಲ್ಲ ಮಧ್ಯರಾತ್ರಿಯಲ್ಲಿ ಜಗದ್ಗುರು ಮಂಟೇಸ್ವಾಮಿ ಈ ಬೊಪ್ಪೇಗೌಡನ ಮನೆಯನ್ನು ವಶ ಮಾಡಿಕೊಳ್ಳಬೇಕು ಅಂತ ಹೇಳಿ ಮುತ್ತಿನ ಜೋಳಿಗೆಗೆ ಕೈ ಹಾಕಿ ಆರು ಕಟ್ಟು ಭಂಗಿಯನ್ನು ಆರು ಕಟ್ಟು ಭಂಗಿಸೊಪ್ಪನ್ನು ತೆಗೆದು ಅಂಗೈನ ಮೇಲೆ ಹಾಕಿಕೊಂಡು ಆಗ ಅವರು ನಾಗರಹಾವಿನ ವಿಷ, ಎಕ್ಕದ ಹಾಲಿನ ರಸ, ಕಳ್ಳಿ ಹಾಲಿನ ರಸ, ಭಂಗಿ ಸೊಪ್ಪಿನ ರಸ ಬಿಲ್ ಪತ್ರೆ ರಸ ಈ ಐದು ರಸವನ್ನು ಧೂಪದಲ್ಲಿ ತೀಡಿ ಗಾಂಜಾ ಮಾಡುತ್ತಾರೆ ಆಗ ಈ ಗಾಂಜಾವನ್ನ ಅವರ ಬಂಗಾರದ ಚಿಲುಮೆಗೆ ಇಪ್ಪತ್ತನಾಲ್ಕು ಖಂಡುಗ ಭಂಗಿ ಸೊಪ್ಪನ್ನು ತುಂಬಿಕೊಂಡು ಧರೆಗೆ ದೊಡ್ಡವರು ಕೆಂಡವನ್ನ ತೆಗೆದು ಅಲ್ಲಿಗೆ ಹಾಕಿ ದಮ್ಮನ್ನು ಹೊಡೆಯುತ್ತಾರೆ. ಒಂದು ದಮ್ಮು ಸೇದಿದ ಮೇಲೆ ಬಲಗಡೆ, ಎಡಗಡೆ, ಧರೆಗೆ ದೊಡ್ಡವರು ವಾಲುತ್ತಾರೆ, ಜೋಲುತ್ತಾರೆ ಆಗ ಅವರು ಇಪ್ಪತ್ತನಾಲ್ಕು ಖಂಡುಗ ಭಂಗಿಸೊಪ್ಪನ್ನ ಮೂರು ದಮ್ಮಿಗೆ ಬೂದಿಯಾಗಿ ಸುರಿದು ಹೋಯ್ತಂತೆ ಆಗ ಮಂಟೇದ ಸ್ವಾಮಿಯವರು ಮೂರು ದಮ್ಮಿಗೆ ಸೇದುಕೊಂಡು ಭಂಗಿ ಸೊಪ್ಪಿನ ಹೊಗೆಯನ್ನ ಒಂದು ಚೂರು ಹೊರಗಡೆ ಬಿಡದೆ ಎಲ್ಲರನ್ನು ಕುಡಿದುಕೊಂಡು ಒಟ್ಟಿಗೆ ನುಂಗುತ್ತಾರೆ.

ಆರು ಖಂಡುಗಾ ಬೂದಿ ಭೂಮಿ ಮೇಲೆ ಸುರಿದು ಬಿಟ್ಟು ಹದಿನೆಂಟು ಸಾವಿರ ಕುರಿಗಳನ್ನು ಕಣ್ಣಾರೆ ನೋಡಿದರು ಧರಗೆ ದೊಡ್ಡವರು ಆಗ ಆ ಹೊಗೆಯನ್ನು ಹದಿನೆಂಟು ಸಾವಿರ ಕುರಿಗಳ ಮೇಲೆ ಉಫ್ ಅಂತ ಉರುಬಿದರಂತೆ. ಆಗ ಅವರ ಅಟ್ಟಿ ಮನೆಯೆಲ್ಲ ಹೊಗೆಯಿಂದ ತುಂಬೊಯ್ತು ಕುರಿಗಳೆಲ್ಲ ಬುಕ್ಕು ಬುಕ್ಕನೇ ಕೆಮ್ಮುತ್ತಾ ಪಕ್ಕನೆ ಪ್ರಾಣ ಬಿಡುತ್ತೇವೆ.

ಧರೆಗೆ ದೊಡ್ಡವರು ಬೆಳಗಾಗುವರಷ್ಟರಲ್ಲಿ ಭಾರಿ ಖಂಡಾಯ ತೆಗೆದುಕೊಂಡು ಹಾಸಿರುವ ಹುಲಿ ಚರ್ಮ ತೆಗೆದುಕೊಂಡು ಮುತ್ತಿನ ಜೋಳಿಗಗೆ ಮಡಗಿಕೊಂಡು ಧರೆಗೆ ದೊಡ್ಡವರು ಕುರಿದೊಡ್ಡಿಯನ್ನು ಮಾಯದಲ್ಲಿ ಬಿಟ್ಟು ದಯಮಾಡಿಸುತ್ತಾರೆ. ಆಗ ಹಾಕಿದ ಬಿಗ ಹಾಕಿದ ರೀತಿಯಲ್ಲಿಯೇ ಇರುತ್ತದೆ. ಆಗ ಬೊಪ್ಪೇಗೌಡನ ಮಕ್ಕಳು ಕುರಿ ಬುಡಬೇಕು ಮತ್ತು ರಾತ್ರಿ ಕುರಿ ಕೊಟ್ಟಿಗೆಗೆ ಕೂಡಿಹಾಕಿದಂತ ಜಂಗುಮನನ್ನ ಕಳುಹಿಸಿ ಬಿಡಬೇಕು ಅಂತ ಹೇಳಿ ಅವರು ಓಡಿ–ಓಡಿ ಬಂದರಂತೆ ಅವರು ಹಾಕಿದ ಬಾಗಿಲು ತೆಗೆಯುತ್ತಾರೆ ಆಗ ಬಂದು ನೋಡಿದಾಗ ಎಲ್ಲಾ ಕುರಿಗಳು ಸತ್ತು ಮಲಗಿದ್ದಾವೆ. ಭಾರಿ ಖಂಡಾಯ, ಭೂಮಿ ತೂಕದ ಮುತ್ತಿನ ಜೋಳಿಗೆ ಮಾತ್ರ ಕುರಿ ಕೊಟ್ಟಿಗೆಲಿ ಮಡಗಿದ್ದಾರೆ ಆದರೆ ಧರೆಗೆ ದೊಡ್ಡವರು ಮಾತ್ರ ಇರುವುದಿಲ್ಲ. ಆಗ ಗಂಡು ಮಕ್ಕಳೆಲ್ಲ ಓಡಿ ಬಂದು ಬೊಪ್ಪೇಗೌಡ್ರ ಮುಂಭಾಗದಲ್ಲಿ ನಿಂತಿಕೊಂಡು ಎಲ್ಲಾ ವಿಷಯವನ್ನ ಹೇಳುತ್ತಾರೆ ಆಗ ಬೊಪ್ಪೇಗೌಡ ದೊಣ್ಣೆ ತೆಗೆದುಕೊಂಡು ಬಲಗೈಲಿ ಹಿಡುಕೊಂಡು ಕುರಿ ಕಂಬಳಿ ತೆಗೆದು ಹೆಗಲ ಮೇಲೆ ಹಾಕಿಕೊಂಡು ಆಳುದ್ದ ಜಗಲಿ ಇಳಿದು ಕುರಿ ದೊಡ್ಡಿಗೆ ಬರುತ್ತಾರೆ ಆಗ ಬಂದು ನೋಡುತ್ತಾರೆ ಧರೆಗೆ ದೊಡ್ಡಯ್ಯ ಬಾಗಿಲ ಮುಂದೆ ಮಾಯ್ದು ಹುಲಿಯ ಮಾಡಿ ನಿಲ್ಲಿಸುತ್ತಾರೆ. ಮಕ್ಕಳು ತಂದೆಗೆ ಕುರಿಗಳು ಹೋದರೆ ಹೋಗಲಿ ನೀನು ಮಾತ್ರ ಕುರಿ ಕೊಟ್ಟಿಗೆಗೆ ಹೋಗಬೇಡ ಅಂದರಂತೆ ಆಗ ಬೊಪ್ಪೇಗೌಡ ಅವರ ಜೋಳಿಗೆ ಬೆತ್ತ ನೋಡಿಕೊಂಡು ಬಹಳ ಚಿಂತೆ ಮಾಡುತ್ತಾನೆ ಚಿಂತೆ ಮಾಡಿಕೊಂಡು ತನ್ನ ಅಟ್ಟಿಗೆ ತಂದಾಗ ಅವನ ಅಟ್ಟಿಯಲ್ಲಿ ಇದ್ದಂತಹ ಅಕ್ಕಿ, ಬೇಳೆ, ಮತ್ತು ರತ್ನ, ಹಣಕಾಸು ಎಲ್ಲ ಮಣ್ಣು ಪಾಲಾಗಿತ್ತು. ಇದೆಲ್ಲವನ್ನ ನೋಡಿ ಬಿಟ್ಟ ಬೊಪ್ಪೇಗೌಡನಿಗೆ ಕೆಟ್ಟ ಬುದ್ಧಿ ಹೋಗಿ ಗುರುಗಳನ್ನು ಪೂಜಿಸುವ ಬುದ್ಧಿ ಬರುತ್ತದೆ. ಬೊಪ್ಪೇಗೌಡ ಸ್ವಾಮಿ ನೀನು ಎಲ್ಲಿದ್ದೀಯಾ ನೀನು ಹೇಳಿದ ಹಾಗೆ ಕೇಳುತ್ತೇನೆ ಎಂದು ಗುರುವಿನ ಧ್ಯಾನ ಮಾಡುತ್ತಿದ್ದ ಸಂದರ್ಭದಲ್ಲಿ ಪರಂಜ್ಯೋತಿಯವರು ಬೊಪ್ಪೇಗೌಡರ ಮನೆಗೆ ಗುರುವು ನಿಜ ರೂಪವನ್ನ ತೋರಿದ್ದರಂತೆ ಆಗ ಬೊಪ್ಪೇಗೌಡನಿಗೆ ಧರೆಗೆ ದೊಡ್ಡವರು ಹೇಳುತ್ತಾರೆ ಅಯ್ಯಾ ಕೇಳಪ್ಪ ನನ್ನ ಕಂದಾ ಕೇಳಪ್ಪ ಗೌಡನೇ ನೀನು ಕಟ್ಟಿರುವಂತಹ ಮನೆ, ನನಗೆ ಮಠ ಮನೆಯಾಗಬೇಕು, ನಿನ್ನ ಮಠದ ಮುಂದೆ ನನಗೆ ಚಂದ್ರ ಶಾಲೆಯಾಗಬೇಕು ಮಠದ ಮುಂದೆ ನನಗೆ ಸ್ನಾನದ ಬಾವಿಯಾಗಬೇಕು. ಬಟ್ಟೆ ಬೇಯಿಸುವ ಒಲೆ ನನಗೆ ಉರಿಗದ್ದಿಗೆಯಾಗಬೇಕು, ಮಡಿವಾಳ ಮಾಚಯ್ಯ ಚೌಳು ಮಣ್ಣು ತುಂಬಿದ ಮನೆ ನನಗೆ ಉಗ್ರಾಣದ ಮನೆಯಾಗಬೇಕು ನೀವು ದಕ್ಷಿಣ ದಿಕ್ಕಿಗೆ ಹೊರಟು ಹೋಗಿ ಅಲ್ಲಿ ಸೊಪ್ಪಿನ ದೊಡ್ಡಿಯಲ್ಲಿ ವಾಸವನ್ನು ಮಾಡಿ ಆಗ ನಿಮಗೆ ನೀವು ಮಣ್ಣು ಹಿಡಿದರೆ ಚಿನ್ನ ನಾನು ಮಾಡುತ್ತೇನೆ ಅಂದರಂತೆ. ಆಗ ಬೊಪ್ಪೇಗೌಡ ಮತ್ತು ಮಡಿವಾಳ ಮಾಚಯ್ಯ ಇವರಿಬ್ಬರು ಮನೆಯಲ್ಲಿರುವಂತಹ ಸಾಮಾನು ತೆಗೆದುಕೊಂಡು ಅಕ್ಕಿ, ಬೇಳೆ ಎಲ್ಲವನ್ನು ತುಂಬಿಕೊಂಡು ಮನೆಯನ್ನ ಬಿಟ್ಟು ಹೋಗುತ್ತಾರೆ. ಆಗ ಧರೆಗೆ ದೊಡ್ಡವರು ಬೊಪ್ಪೇಗೌಡನಪುರ ಆಯ್ತು ಅಂತ ಹೇಳಿ ಬಹಳ ಸಂತೋಷನ್ನ ಪಟ್ಟರಂತೆ. ಆಗ ಸಂತೊಷಗೊಂಡು ಧರೆಗೆ ದೊಡ್ಡವರು ಬೊಪ್ಪೇಗೌಡ ನೀನು ಸತ್ತು ಸ್ವರ್ಗಕ್ಕೆ ಸೇರುವಾಗ

ನೀನು ಖಂಡಿತವಾಗಿ ಬ್ರಹ್ಮನಲ್ಲಿಗೆ ಹೋಗಬೇಕು ಈ ಭೂಮಿಗೆ ಈ ಲೋಕಕ್ಕೆ ನಿನ್ನ ದೇವರು ಮಾಡುತ್ತೇನೆ ಅಂತ ಹೇಳಿ ತುರುಕರಿಗೆ ಪೀರನಾ ಮಾಡಿ ಕುರುಬರಿಗೆ ನಿನ್ನ ಬೀರದೇವ ಮಾಡುತ್ತೀನಿ ಅಂತ ಹೇಳಿ ನಿನ್ನ ಲಿಂಗದ ಪೂಜೆ ಲೋಕದಲ್ಲಿ ನಿನಗೆ ಆಗಲಿ ಅನ್ನುತ್ತಾರೆ. ಧರೆಗೆ ದೊಡ್ಡವರು ಹುಲಿಯ ಚರ್ಮ ಹಾಸಿ, ಜಿಂಕೆ ಚರ್ಮ ತೆಗೆದು ಬನ್ನಿ ಹಿಂದೆ ಬಿಟ್ಟುಕೊಂಡು ಭಾರಿ ಖಂಡಾಯ ಭೂಮಿಗೆ ನಾವಿ ಧ್ಯಾನದ ಪುಸ್ತಕವನ್ನ ತೆಗೆದು ತಾಮ್ರದ ಶಾಸನಗಳನ್ನು ತೊಡೆಯ ಮೇಲೆ ಇಟ್ಟುಕೊಂಡು ವಿಭೂತಿಯನ್ನು ಹರಡಿ ಕಪ್ಪು ದೂಳ್ತಾ ಇಟ್ಟು ಉರಿಗದ್ದಿಗೆಗೆ ಮಾಡಿಕೊಂಡು ಗದ್ದಿಗೆ ಮೇಲೆ ಕುಳಿತುಕೊಳ್ಳುತ್ತಾರೆ. ಆಗ ಅವರು ಮೂರು ಗಂಟೆ ಉರಿಗದ್ದಿಗೆ ಮೇಲೆ ಪವಾಡ ಮಾಡುತ್ತಾರೆ. ಆಗ ಅವರು ಬಲ ಮಗ್ಗುಲಲ್ಲಿ ಮಲಗಿ ಒರಗುತ್ತಾರೆ. ಆಗ ನಿದ್ದೆ ಮಾಡಿಕೊಂಡು ಎದ್ದ ಮೇಲೆ ರಾಜಮನೆತನದ ಸಕ್ಕರೆ ಪಟ್ಟಣದ ಮಕ್ಕಳನ್ನ ಕರೆದು ನಿಮ್ಮಿಂದ ನನಗೆ ಮಠವಾಗಬೇಕು ಮಠದ ಮುಂದೆ ಸ್ನಾನದ ಭೂಮಿಯಾಗಬೇಕು, ನನಗೆ ಮಠ ತೋಪು ಆಗಬೇಕು, ತೋಪಿನ ಮುಂದೆ ಚಂದ್ರ ಶಾಲೆ ಆಗಬೇಕು, ಅಂತ ಹೇಳಿ ಅವರಿಗೆ ವರಕೊಟ್ಟು ಅವರು ಉರಿಗದ್ದಿಗೆಯ ಮೇಲೆ ಕುಳಿತುಕೊಂಡು ಮಂಟೇಸ್ವಾಮಿ ಇಂದೆಲ್ಲಾ ನಾಳೆ ಮಠ ಮನೆಯಾಗುತ್ತಿದೆ. ಮಠದ ಮುಂದೆ ಸ್ನಾನದ ಭೂಮಿಯಾಗುತ್ತದೆ ಮಠದ ಮುಂದೆ ತೋಪಾಗುತ್ತದೆ. ನನ್ನ ಮಠ ಬಾಳು ಬೆಳೆಸುವಂತಹ ಚಂದ್ರ ಶಾಲೆಯಾಗುತ್ತದೆ ಎಂದು ಹೇಳಿ ಧರೆಗೆ ದೊಡ್ಡವರು ಮುಂದಕ್ಕೆ ಪ್ರಯಾಣ ಬೆಳೆಸುತ್ತಾರೆ. ಧರೆಗೆ ದೊಡ್ಡವರು ರಾಜ ಬೊಪ್ಪೇಗೌಡನ ಪುರದ ಉರಿಗದ್ದಿಗೆ ಮೇಲೆ ಕುಳಿತುಕೊಂಡು ಕೆನ್ನೆಯ ಮೇಲೆ ಕೈಮಡಿಕೊಂಡು ಮನಸ್ಸಿನಲ್ಲಿ ಬಹಳ ಯೋಚನೆ ಮಾಡುತ್ತಾ ಕುಳಿತ್ತಿದ್ದಾರೆ. ಆಗ ಗುರುವಿಗೆ ಜ್ಞನೋದಯವಾಗಿ ಖಂಡಾಯವನ್ನ ಹೆಗಲ ಮೇಲೆ ಹೊತ್ತುಕೊಂಡು ಮುಳ್ಳಿನ ಪಾದರಕ್ಷೆಯನ್ನ ಹಾಕಿಕೊಂಡು ಎಪ್ಪತ್ತು ಮಾರುದ್ದಧ ಜಡೆಗಳನ್ನು ಬಿಟ್ಟುಕೊಂಡು ಅದನ್ನ ಭೂಮಿ ಮೇಲೆ ಧರಧರನೆ ಎಳೆದುಕೊಂಡು ಮಳವಳ್ಳಿ ತಾಲ್ಲೂಕಿನ ನಿಡಘಟ್ಟ ಗ್ರಾಮಕ್ಕೆ ಒಬ್ಬರೆ ದಯಮಾಡಿಸುತ್ತಾರೆ.

ಈ ರೀತಿಯಾಗಿ ಧರಗೆ ದೊಡ್ಡವರು ಬೊಪ್ಪೇಗೌಡನ ಪುರವನ್ನ ಬಿಟ್ಟು ಒಬ್ಬರೆ ನಿಡಘಟ್ಟ ಗ್ರಾಮಕ್ಕೆ ಬರುವ ವೇಳೆ ನಿಡಘಟ್ಟದ ಒಳಗೆ ಇರುವ ಅರಳಿ ಕಟ್ಟೆಯ ಜಗಲಿಯ ಮೇಲೆ ಅರಳಿ ಮರದ ಬುಡದಲ್ಲಿ ಬಸವಚಾರಿ ಮತ್ತು ಹೆಂಡತಿಯಾದ ಮುದ್ದಮ್ಮ ಕುಳಿತುಕೊಂಡು ಗಂಡನ. ಮುಖ ಹೆಂಡತಿ ನೋಡಿಕೊಂಡು ಮಾತನಾಡುತ್ತಾ ನಿನ್ನ ಮದುವೆಯಾದ ಕಾಲದಿಂದ ಮಕ್ಕಳು ಹುಟ್ಟಿದ ಕಾಲದಿಂದಲೂ ನಮ್ಮ ಸತಿ ಪತಿಗಳಿಗೆ ಆ ದೇವರು ಮಕ್ಕಳು ಕೊಟ್ಟನು. ಆದರೆ ಆ ಶಿವಾ ನಮಗೆ ಅನ್ನ ಕೊಡಲಿಲ್ಲ ಉಡುವುದಕ್ಕೆ ಬಟ್ಟೆ ಕೊಡಲಿಲ್ಲ ಕುಡಿಯುವುದಕ್ಕು ನೀರಿಲ್ಲ. ಆರು ಜನ ಗಂಡು ಮಕ್ಕಳು ಅಪ್ಪನ ಹತ್ತಿರ ಬಂದು ಅಪ್ಪ ನಮಗೆ ತುಂಬಾ ಹಸಿವು ಎಂದಾಗ ಇವರಿಬ್ಬರು ಅರಳಿ ಕಟ್ಟೆಯ ಮೇಲೆ ಗಳಗಳನೆ ಅಳುತ್ತಾ ಕುಳಿತ್ತಿರುತ್ತಾರೆ. ಆಗ ಬಸವಚಾರಿ ಆ ಮಕ್ಕಳ ಕಟ್ಟುಕೊಂಡು ನಿನ್ನ ಕಟ್ಟುಕಂಡು ಈ ನಿಡಘಟ್ಟದಲ್ಲಿ

ಬಾಳುವುದಕ್ಕೆ ಆಗುತ್ತಿಲ್ಲ ಮಡದಿ ಈ ಬಡತನ ಬಂದು ಹನ್ನೆರಡು ವರುಷ ಆಯಿತು ಈ ಬಡತನವನ್ನ ತಾಳಲು ಆಗುತ್ತಿಲ್ಲ ಎಂದು ಮುದ್ದಮ್ಮನನ್ನ ಬಾಚಿ ತಬ್ಬಿಕೊಂಡು ಕೂಲಿನಾದ್ರು ಮಾಡಿ ಆ ಆರು ಜನ ಮಕ್ಕಳನ್ನ ಸಾಕಿ ಸಲಗಬೇಕು ಎನ್ನುತ್ತಾ ಮಾನದ ಮೇಲೆ ಅಂಗೈ ಅಗಲ ಬಟ್ಟೆ ಇಲ್ಲ ಎಂದೂ ಹೇಳಿ ಅಡಿಕೆ ಎಲೆಯನ್ನ ಉಡುಪಾಗಿ ಮಾಡಿ ಅದನ್ನೆ ಉಟ್ಟುಕಂಡು ಉಗನಿ ಅಂಬನ್ನು ನಡುವಿಗೆ ದಾರವಾಗಿ ಮಾಡಿಕೊಂಡು ಶಿವ ಭಕ್ತರ ಮಠ ಮನೆಗೆ ಬಸವಚಾರಿ ಬರುತ್ತಾರೆ. ಆಗ ಶಿವಭಕ್ತರು ಮನೆಗೆ ಬಂದು ಅಲ್ಲಿ ದನಗಳನ್ನು ಕಾಯುವ ಕೆಲಸವನ್ನು ಮಾಡಿ ಕಾಲ ಕಳೆಯುತ್ತಿರುತ್ತಾರೆ. ಇದೇ ರೀತಿ ಮುದ್ದುಮ್ಮನಿಗೆ ಉಡುವುದಕ್ಕೆ ಬಟ್ಟೆ ಇಲ್ಲದೆ ಚಿಂದಿ ಬಟ್ಟೆಗಳನ್ನ ಆಯ್ದುಕೊಂಡು ಸೆಣಬಿನ ದಾರ ತೆಗೆದುಕೊಂಡು ಅಂಚಿ ಕಡ್ಡಿಯನ್ನು ಸೂಜಿ ಮಾಡಿಕೊಂಡು ಬಟೆಯನ್ನು ಹೊಲೆದುಕೊಂಡು ಮೂರು ಮೊಳ ಉಡುಪನ್ನು ಮಾಡಿಕೊಳ್ಳುತ್ತಾಳೆ. ಆದರೆ ಆ ಮೂರು ಮೊಳ ಉಡುಪನ್ನು ತೆಗೆದು ಮುದ್ದಮ್ಮ ಇದನ್ನಾದರು ಸುತ್ತಿಕೊಂಡು ನನ್ನ ಮಾನ ಮರೆ ಮಾಡಿ ಕೊಳ್ಳಬೇಕೆಂದು ಬಟ್ಟೆಯನ್ನೆ ಸುತ್ತಿಕೊಳ್ಳುತ್ತಾಳೆ ಆದರೆ ಅದನ್ನ ನಡೆಗೆ ಸುತ್ತಿಕೊಳ್ಳುವ ಅಂದರೆ ಎದೆ ಕಾಣುತ್ತದೆ ಎದೆ ಮರೆ ಮಾಡಿಕೊಳ್ಳುವ ಅಂದರೆ ನನ್ನ ಮಾನ ಕಾಣುತ್ತದೆ ಅಂತೇಳಿ ನಡಿನಿಂದ ಕೆಳಗಡೆ ಎದೆಯಿಂದ ಮೇಲಕ್ಕೆ ತುಂಡು ಉಡಿಗೆ ಉಟ್ಟುಕೊಂಡು ಮುದ್ದಮ್ಮನು ಕೂಡ ಶಿವಭಕ್ತರ ಮನೆಗೆ ಬಂದು ರಾಗಿ ಬೀಸುವ ಕಾಯಕ ಮಾಡುತ್ತಾಳೆ.

ಈ ರೀತಿಯಾಗಿ ಕೆಲಸಮಾಡಿ ಶಿವಭಕ್ತರ ಮನೇಲಿ ಕೊಟ್ಟಂತಹ ಊಟ ಈಸಿಕೊಂಡು ಬಂದು ನಿಡಘಟ್ಟದ ಕಲ್ಲು ಕಟ್ಟೆಯ ಜಗಲಿ ಮೇಲೆ ಕುಳಿತುಕೊಂಡು ಸತಿ-ಪತಿ ಇಬ್ಬರೂ ಆರು ಜನ ಗಂಡು ಮಕ್ಕಳಿಗೆ ಊಟ ಮಾಡಿಸುತ್ತಾರೆ. ಈ ಮಕ್ಕಳಿಗೆ ಊಟ ಮಾಡಿಸುವ ಸಮಯದಲ್ಲಿ ಜಗದ್ಗುರು ಧರೆಗೆ ದೊಡ್ಡವರು ನಿಡಘಟ್ಟದ ಬೀದಿಯೊಳಗೆ ದಾನ ಧರ್ಮ ಸಾರುತ್ತಾರೆ. ಆಗ ನಿಡಘಟ್ಟದ ಅರಳಿಕಟ್ಟೆಯ ಜಗಲಿಯನ್ನ ಕಣ್ಣಿಂದ ನೋಡಿದ ಧರೆಗೆ ದೊಡ್ಡವರು ಅರಳಿಕಟ್ಟೆಯ ಹತ್ತಿರ ಬರುತ್ತಾರೆ. ಆಗ ಬಂದಂತಹ ಧರೆಗೆ ದೊಡ್ಡವರು ಅರಳಿಕಟ್ಟೆಯ ಮೇಲೆ ಬಂದು ನಿಂತುಕೊಳ್ಳುತ್ತಾರೆ ಅಲ್ಲಿ ನಿಂತುಕೊಂಡು ದಾನ ಧರ್ಮವನ್ನ ಸಾರುತ್ತಾರೆ. ಆಗ ಅಲ್ಲಿದ್ದ ಬಸವಚಾರಿ ಮತ್ತು ಮುದ್ದಮ್ಮ ಗುಡಗುಡನೆ ಒಡಿ ಬಂದು ಗುರುವಿನ ಪಾದದ ಮೆಲೆ ಬಿದ್ದರಂತೆ. ಆಗ ಸತಿ-ಪತಿಗಳು ಪಾದವನ್ನು ಹಿಡಿದುಕೊಂಡು ನಮ್ಮ ಕಷ್ಟಕ್ಕೆ ಯಾವ ದೇವರು ಕೂಡ ಇಲ್ಲ, ಕಂಡ-ಕಂಡಾ ದೇವರಿಗೆಲ್ಲಾ ಕೈ ಮುಗಿದ್ದೇವು ಆದರೂ ನಮ್ಮ ಕಷ್ಟ ತೀರಲಿಲ್ಲ.

ನೀನು ತುಂಬಿದ ಸೋಮವಾರ ಒಂದು ಧರ್ಮ ನೀಡಮ್ಮ ಭಿಕ್ಷೆ ನೀಡಮ್ಮ ಎಂದು ಕೇಳ್ತಿರಲ್ಲ ಅಪ್ಪ ನಿನಗೆ ನಾವು ಏನೂ ಧರ್ಮ ಕೊಡಲಿ ಎಂದು ಹೇಳುತ್ತಾರೆ. ಆಗ ಸತಿ ಪತಿಗಳು ನಮಗೆ ಬಡತನ ಬಂದು ಹನ್ನೆರಡು ವರುಷಗಳು ಆಗಿ ಹೋಗಿದೆ. ನಮ್ಮ ಬಡತನ ನೀಗಿಸುವ ದೇವರು ಒಬ್ಬರು ಬರಲಿಲ್ಲ ನೀವಾದ್ರು ಬಂದಿದ್ದೀರಿ ನಮ್ಮ ಬಡತನವನ್ನು ದೂರಮಾಡಿ ನಮಗೆ ಭಾಗ್ಯಕೊಟ್ಟು ಕಾಪಾಡು ತಂದೆ ಎನ್ನುತ್ತಾರೆ. ಈ

ರೀತಿಯಾಗಿ ಅವರ ಪಾದದ ಮೇಲೆ ಜಕ್ಕ-ಜಿಕ್ಕಿ ಅಳುತ್ತಿರುವಾಗ ಅವರ ಕಣ್ಣಿನಿಂದ ಜಾರಿ ಬಿದ್ದ ಕಣ್ಣೀರು ಅವರ ಪಾದಗಳನ್ನು ತೊಳೆಯುತ್ತವೆ. ಆಗ ಧರೆಗೆ ದೊಡ್ಡವರಿಗೆ ಇವರ ಮೇಲೆ ಕರುಣೆ ಬಂದು ಇವರ ಬಡತನ ಹಾಳು ಮಾಡಿ ಬಿಟ್ಟು ಇವರಿಗೆ ಭಾಗ್ಯಕೊಡಬೇಕಾದರೆ ಇವರಿಗೆ ಯಾವ ರೀತಿ ಭಾಗ್ಯಕೊಡಬೇಕು ಅಂತೇಳಿ ಯೋಚನೆ ಮಾಡುತ್ತಿರುವಾಗ ಅವರಿಗೆ ಕಲ್ಯಾಣ ಪಟ್ಟಣದ ಒಂದು ನೆನಪು ಬರುತ್ತದೆ. ಆಗ ಕಲ್ಯಾಣ ಪಟ್ಟಣ ನೆನೆದುಕೊಂಡು ಬಸವಣ್ಣನವರಿಗೆ ವರಕೊಟ್ಟ ಕಲ್ಯಾಣ ಪಟ್ಟಣವನ್ನ ಬಿಟ್ಟು ಬರುವಾಗ ಆ ಕಲ್ಯಾಣ ಪಟ್ಟಣದಲ್ಲಿ ಬಾಚಿ ಸವಯ್ಯ ಬಾಗಿಲನ್ನ ಕಾಯುತ್ತಿರುತ್ತಾನೆ.

ಅವನನ್ನ ಇವರ ಹೊಟ್ಟೆಗೆ ಹಾಕಿ ಇವರ ಹೊಟ್ಟೆಯಲ್ಲಿ ಹುಟ್ಟಿದಂತ ಮಗನಿಂದ ಇವರ ದರಿದ್ರಹಾಳು ಮಾಡಿ ಇವರಿಗೆ ಬಂದ ಬಡತವನ್ನ ದೂರಮಾಡಬೇಕು ಅಂತ ಹೇಳಿ ಧರೆಗೆ ದೊಡ್ಡವರು ಬಸವಲಿಂಗಯ್ಯನ ರೂಪದಲ್ಲಿದಂತಹ ಮಗನ ಜ್ಞಾನ ಮಾಡಿಕೊಂಡು ಧರೆಗೆ ದೊಡ್ಡವರು ಬಸವಚಾರಿ ಮತ್ತು ಮುದ್ದಮ್ಮನಿಗೆ ಒಂದು ಮಾತುಕೊಡುತ್ತಾರೆ. ಆ ಮಾತು ಏನೆಂದರೆ ನಿಮ್ಮ ಬಡತನ ಹೋಗಬೇಕಾದರೆ ನೀವು ನಿಡಘಟ್ಟ ಬಿಟ್ಟು ಮಳವಳ್ಳಿ ತಾಲ್ಲೂಕಿನ ಮಾರೇಹಳ್ಳಿ ಗ್ರಾಮಕ್ಕೆ ಹೋಗಿ ಸೇರಿಕೊಳ್ಳಿ ಆ ಗ್ರಾಮಕ್ಕೆ ಸೇರಿದಾಗ ನಿಮಗೆ ಒಂದು ಗಂಡು ಮಗು ನನ್ನ ವರದಲ್ಲಿ ಜನಿಸುತ್ತಾನೆ. ಆ ಮಗು ನಿಮಗೆ ಏಳನೇ ಮಗುವಾಗಿ ಎಳೇ ಕೆಂಪಣ್ಣ ಆ ಕೆಂಪಚಾರಿ ಮಗನ ಹೊಟ್ಟೆಗೆ ಹಾಕುತ್ತಾನೆ.

ಆ ಮಗು ಹುಟ್ಟಿದ ಏಳು ದಿನಕ್ಕೆ ನಿಮಗೆ ಮಡಿಕೆ ತುಂಬ ಹಣ ಕೊಡುತ್ತೀನಿ. ಮೊರದ ಬಂಗಾರ ಕೊಡುತ್ತೀನಿ, ಮಣ್ಣಿಗೆ ಹಿಟ್ಟಿಗೆ ಮಾಯ ಮಾಡುತ್ತೇನೆ. ಚಿನ್ನದ ಇಟ್ಟಿಗೆ ಮಾಡುತ್ತೀನಿ ನಿಮಗೆ ಕೇಳಿದ ಭಾಗ್ಯವ ಕೊಡುತ್ತೀನಿ ಎನ್ನುತ್ತಾರೆ. ಈ ರೀತಿ ವರವನ್ನ ಕೊಟ್ಟು ಈಗ ಧರೆಗೆ ದೊಡ್ಡವರು ನಿಡಘಟ್ಟವನ್ನ ಬಿಟ್ಟು ಕುರುಬನ ಕಟ್ಟೆಗೆ ಆಗಮಿಸುತ್ತಾರೆ. ಆಗ ಕುರುಬನ ಕಟ್ಟೆಗೆ ಬಂದವರೆ ಮನೆ-ಮನೆಗೆ ಹೋಗಿ ಭಿಕ್ಷೆಯನ್ನು ತಾವಾಗಿಯೇ ಮಾಡಿದ್ದಾರೆ. ಈ ರೀತಿ ಭಿಕ್ಷೆಯನ್ನು ಮಾಡಿ ಅಲ್ಲಿ ನೂರೊಂದು ಒಕ್ಕಲ ಜನಗಳನ್ನ ಪಡೆದುಕೊಂಡು ಅಲ್ಲಿ ಕುರುಬನ ಕಟ್ಟೆಯ ಲಿಂಗಯ್ಯನ್ನಾಗಿ ನಾನು ಮುಂದಕೆ ಹೋಗಬೇಕು ಅಂತಹೇಳಿ ಊರ ಮಧ್ಯದಲ್ಲಿ ಗುರುದೇವಾ ಅರಳಿಕಟ್ಟೆ ಜಗಲಿ ಮೇಲೆ ಹುಲಿಯ ಚರ್ಮ ಹಾಸಿ, ವಿಭೂತಿಯನ್ನು ಹರಡಿ, ಖಂಡುಗ ಧ್ಯಾನದ ಬುಕ್ಕನ್ನು, ಕಾಲದ ಜ್ಞಾನದ ಬುಕ್ಕನ್ನು ಮತ್ತು ತಾಮ್ರದ ಶಾಸನಗಳನ್ನು ತೆಗೆದು ತೊಡೆಯ ಮೇಲೆ ಇಟ್ಟುಕೊಂಡು ಅವರು ಖಂಡಾಯವನ್ನು ಭೂಮಿಗೆ ಜಡಿದು ಧರೆಗೆ ದೊಡ್ಡವರು ಆ ಜಗಲಿಯ ಮೇಲೆ ಮುಕ್ಕಾಲುಗಳಿಗೆ ಮಲಗುತ್ತಾರೆ. ಈ ರೀತಿಯಾಗಿ ಮಲಗಿದ್ದಾಗ ಆ ಊರಿನ ನೂರೊಂದು ಒಕ್ಕಲು ಜನರು ಈ ಗುರು ಯಾರಾಗಿರಬಹುದು. ನಮ್ಮ ಗ್ರಾಮದ ಕಲ್ಲು ಕಟ್ಟೆಯ ಜಗಲಿಗೆ ಬಂದು ಈ ಹುಲಿ ಚರ್ಮ ಹಾಸಿಕೊಂಡು ಜಿಂಕೆ ಚರ್ಮ ಬೆನ್ನಿಗೆ ಕಟ್ಟಿಕೊಂಡು ಮಲಗಿದ್ದಾರಲ್ಲ. ಇವರು

ಯಾರಾಗಿರಬಹುದು ಎಂದು ಹೇಳಿ. ಅಲ್ಲಿಗೆ ಬಂದು ನೀವು ಯಾರಪ್ಪ ಎಂದು ಕೇಳುತ್ತಾರೆ. ಆಗ ಅಲ್ಲಿಯ ಜನಗಳು ನಮ್ಮ ಮನೆ ಮಠಗಳಲ್ಲಿ ಮಲಗುವುದಕ್ಕೆ ಸ್ಥಳವಿದೆ ನಿಮಗೆ ಊಟ ಎಂದು ಪಾದ ಪೂಜೆ ಮಾಡುವಂತಹ ಜನಗಳು ನಮ್ಮ ಊರಿನಲ್ಲಿಂದು ಅದನ್ನೆಲ್ಲಾ ಬಿಟ್ಟು ಈ ಅರಳಿ ಮರದ ಜಗಲಿಯಲ್ಲಿ ಯಾಕೆ ಮಲಗಿದ್ದೀರಿ ಅಂತ ಹೇಳಿ ನಮ್ಮ ಮನೆಗಳಿಗೆ ಬಂದು ಬಿಡಿ ಅಂದಾಗ ಧರೆಗೆ ದೊಡ್ಡವರು ಕೇಳಿರಪ್ಪ ನಾನು ನಿಮ್ಮ ಗ್ರಾಮಕ್ಕೆ ನಿಮ್ಮ ಊರಿಗೆ ಯಾಕೆ ಬಂದೆ ಅಂದರೆ ನಾನು ಬಂದದ್ದು ಎರಡಟ್ಟಿ ಒಕ್ಕಲು ಪಡಿಬೇಕು ಅಂತ ಬಂದಿಲ್ಲ. ನಾನು ಈ ಧರೆಯನ್ನು ತಂದವರು ಧರೆಗೆ ದೊಡ್ಡಯ್ಯನವರು ಮತ್ತು ಈ ಭೂಮಿ ಪಡೆದವರು ಆದುದರಿಂದ ನನಗೆ ನಿಮ್ಮ ಊರಿನಲ್ಲಿ ಬಂದು ಮನೆ ಮಠ ಆಗಬೇಕು ಎನ್ನುತ್ತಾರೆ.

ಧರೆಗೆ ದೊಡ್ಡವರು ನಾನು ಉತ್ತರ ಖಂಡವನ್ನೆ ಬಿಟ್ಟು ದಕ್ಷಿಣ ಖಂಡದಿಂದ ಬರುತ್ತಿದ್ದೇನೆ ನಾನು ರಾಜ ಬೊಪ್ಪೇಗೌಡನ ಪುರದಲ್ಲಿ ಸಾಲು ಮನಸ್ಥನಿಗೆ ಸಂಪದ್ಭರಿತವಾದ ಮನೆಯನ್ನು ಕೊಟ್ಟು ಈಗ ನಾನು ಕುರುಬ ಗೌಡರ ಅಟ್ಟಿ ಹೆಗ್ಗಡೆ ಗೌಡರ ಅಟ್ಟಿ ಮಠ ಮನೆ ಮಾಡಿಕೊಂಡು ಮಠ ತೋಪು ಮಾಡಿಕೊಂಡು, ಮಠದ ಮುಭಾಂಗದಲ್ಲಿ ಸ್ನಾನದ ಬಾವಿ ಮಾಡಿಕೊಂಡು, ಮಡಿವಾಳ ಮಾಚಪ್ಪನ ಬಟ್ಟೆ ಬೇಯಿಸುವ ಒಲೆಯನ್ನ ಉರಿಗದ್ದಿಗೆ ಮಾಡಿಕೊಂಡು, ಉರಿಗದ್ದಿಗೆ ಮೇಲೆ ಒಡೆದು ಉದ್ಭವವಾಗಬೇಕು ಅಂತೇಳಿ ಅಲ್ಲಿ ಉರಿಗದ್ದಿಗೆ ಮೇಲೆ ಕುಳಿತುಕೊಂಡ ಅಲ್ಲಿಗೆ ರಾಜ ಬೊಪ್ಪೇಗೌಡನ ಪುರ ಅಂತ ನಾಮಕರಣ ಮಾಡಿ ಈಗ ನಾನು ರಾಜ್ಯಕ್ಕೆ ಗುರುವಾಗಿ ಬಂದಿದ್ದೇನೆ ಎಂದು ಹೇಳಿ ನೀವು ರಾಜ ಬೊಪ್ಪೇಗೌಡನ ಪುರಕ್ಕೆ ನೀವು ನೂರೊಂದು ಒಕ್ಕಲು ಜನಗಳೆಲ್ಲ ಬಂದು ನಿಮ್ಮಿಂದ ಕೊಂಬು ಕಹಳೆಯಾಗಬೇಕು. ನಿಮ್ಮಿಂದ ನಮಗೆ ಬಿರುದು ಲಾಂಚಾಣಗಳು ಬರಬೇಕು ನಿಮ್ಮಿಂದ ನನಗೆ ಛತ್ರಿ ಚಾಮರವಾಗಬೇಕು ಈ ರೀತಿಯಾಗಿ ಮಾಡಿಕೊಂಡು ರಾಜ ಬೊಪ್ಪೇಗೌಡನ ಪುರದಲ್ಲಿ ನಾನು ಮಲಗಿದ್ದೇನೆ ಎಂದರಂತೆ ಹಾಗೆಯೇ ನಮಗೆ ಈ ಕುರುಬನ ಕಟ್ಟೆಯಿಂದ ನನಗೆ ಭಾರಿಖಂಡಾಯ ಬರಬೇಕು ಅಂತ ಹೇಳುತ್ತಾರೆ.

ಅಲ್ಲಿನ ಜನರು ಸ್ವಾಮಿ ನಮ್ಮಿಂದ ನಿಮಗೆ ಶಿವಪೂಜೆ ಮಾಡುತ್ತೇವೆ. ಅಗತ್ಯವಾಗಿ ಸ್ವಾಮಿ ಈಗ ಛತ್ರಿ ಚಾಮರ ಸಹಿತವಾಗಿ, ನಿಮ್ಮ ಭಾರಿ ಖಂಡಾಯದ ಸಹಿತವಾಗಿ, ಈ ಬಸವನ ಸಹಿತವಾಗಿ ಕೊಂಬು ಕಹಳೆ ಸಹಿತವಾಗಿ ನಮ್ಮ ಕುರುಬನ ಕಟ್ಟೆಯಿಂದ ಈಗ ನಿನ್ನ ಬೊಪ್ಪೇಗೌಡನಪುರದ ಮಠ ಮನೆಗೆ ಶಿಶು ಮಕ್ಕಳು ಆಗುತ್ತೇವೆ ಎಂದು ಹೇಳುತ್ತಾರೆ. ಆಗ ಅದಕ್ಕಿಂತ ಮೊದಲಾಗಿ ಈ ಕುರುಬನ ಕಟ್ಟೆ ಲಿಂಗಯ್ಯ ಅಂತ ನಾಮಕರಣ ಮಾಡಿಕೊಟ್ಟು ಬಿಟ್ರೆ ನಿಮಗೆ ಕುರುಬನ ಕಟ್ಟೆ ಲಿಂಗಯ್ಯ ಅಂತ ಹೆಸರು ಬಂದು ಬಿಟ್ರೆ ನಾವು ವಾರ-ವಾರ ಎಂಟು ದಿವಸ ತುಂಬಿದ ಒಳಗಾಗಿ ನಿಮಗೆ ಕುರುಬನ ಕಟ್ಟೆ ಒಳಗೆ ಮಠ ಕಟ್ಟುತ್ತೇವೆ ಆಗ ನೀವು ಈ ಊರಿನಲ್ಲಿ ಇರಬಹುದು. ಧರೆಗೆ ದೊಡ್ಡವರು ಆಗಬಹುದು ಎಂದು ಹೇಳಿ ಕುರುಬನ ಕಟ್ಟೆ ಒಳಗೆ ಮಠ

ಕಟ್ಟಿಸಿಕೊಂಡು ಮಠದ ಮುಂಭಾಗದಲ್ಲಿ ಬಾವುಟ ಹಾಕಿಸಿಕೊಂಡು ಉತ್ತರ ದೇಶದ ಖಂಡಾಯವನ್ನ ಮಠ ಮನೆಯೊಳಗೆ ಮಠ ಹುಲಿ ಚರ್ಮ ಹಾಸಿಕೊಂಡು ಜಿಂಕೆ ಚರ್ಮ ಹೊದ್ದುಕೊಂಡು ಉರಿಗದ್ದಿಗೆ ಮಾಡಿಕೊಂಡು ಹಗಲು ಮೂರು ರಾತ್ರಿ ಮೂರು ಕುರುಬನ ಕಟ್ಟೆ ಲಿಂಗಯ್ಯ ಅಂತೇಳಿ ನಾಮಕರಣವನ್ನ ಮಾಡಿಕೊಂಡು ಈಗ ನನಗೆ ಛತ್ರಿ ಚಾಮರವಾಯಿತು. ಬಸವನಾಯ್ತು ಕೊಂಬು ಕಹಳೆ ಸೃಷ್ಠಿ ಮಾಡಿಕೊಂಡಾಯ್ತು ಅಂತ ಹೇಳಿ ಈಗ ನಾನು ಎಲ್ಲಿಗೆ ಹೋಗಬೇಕು ಅಂತಹೇಳಿ ಕುರುಬನ ಕಟ್ಟೆಯಲ್ಲಿ ಭಕ್ತರನ್ನು ಪಡೆದುಕೊಂಡು ಅವರು ಕುರುಬನ ಕಟ್ಟೆಯ ಲಿಂಗಯ್ಯ ಅಂತ ಹೇಳಿ ಅಪ್ಪಾಜಿ ಗುರುವು ಹೊನ್ನ ನಾಯಕನಹಳ್ಳಿಗೆ ಬರುತ್ತಾರೆ.

ಆಮೇಲೆ ಜಗದ್ಗುರು ಮಂಟೇಸ್ವಾಮಿಯವರು ಹೊನ್ನನಾಯಕನಹಳ್ಳಿಗೆ ಬಂದು ಅಲ್ಲಿ ಎರಡು ಒಕ್ಕಲು ಜನಗಳನ್ನ ತಾನಾಗಿಯೇ ಪಡೆದುಕೊಂಡು ಭಾರಿಯ ಖಂಡಾಯ ಹೆಗಲ ಮೇಲೆ ಹೊತ್ತುಕೊಂಡು ಅವರು ಮುಳ್ಳಿನ ಪಾದರಕ್ಷೆಯನ್ನ ಧರಿಸಿಕೊಂಡು ಬೆನ್ನಿಂದ ಬಾರಿಸುವ ತಂಬೂರಿಯನ್ನು ಎದೆ ಮೇಲೆ ಹೊತ್ತಿಕೊಂಡು ಅವರು ಮುಂದಕ್ಕೆ ಬರುತ್ತಾರೆ. ಅಂದರೆ ಅವರು ಹೊನ್ನ ನಾಯಕನಹಳ್ಳಿಯ ಕೇರಿಗೆ ಧರೆಗೆ ದೊಡ್ಡವರು ಆಗಮಿಸುತ್ತಾರೆ. ಹೊನ್ನ ನಾಯಕನಹಳ್ಳಿಗೆ ಬಂದು ಅಲ್ಲಿ ಚೆನ್ನಯ್ಯನ ಕೇರಿಗೆ ಬಂದು ಧರೆಗೆ ದೊಡ್ಡವರು ಬೀದಿ ಬೀದಿಯಲ್ಲಿ ಭಿಕ್ಷೆಯನ್ನು ಮಾಡುತ್ತಾರೆ ಆಗ ಅಲ್ಲಿ ಮನೆ–ಮನೆಯಲ್ಲಿ ಪಾದ ಪೂಜೆ ಮಾಡಿಸಿಕೊಂಡು ಪಾದಕೆ ಶರಣು ಮಾಡಿಸಿಕೊಂಡು ಅಲ್ಲಿ ಜನರಿಂದ ಚಿನ್ನದ ಮಂಟೇಸ್ವಾಮಿ ಎಂದು ನಾಮಕರಣ ಕಟ್ಟಿಸಿಕೊಂಡು ಆಗ ಚನ್ನಯ್ಯನ ಕೇರಿ, ಹೊನ್ನಯ್ಯನ ಕೇರಿಗೆ ಬಂದು ಕೇಳಿರಪ್ಪ ನನಗೆ ನಗಾರಿ ಆಗಬೇಕು ನನಗೆ ಕೊಂಬಿನ ಕಾಹಳೆಯಾಗಬೇಕು, ತಮಟೆಯಾಗಬೇಕು ಮತ್ತು ನೀವು ಎರಡು ಒಕ್ಕಲ ಜನಗಳು ನನ್ನ ಆದಿ ಬೊಪ್ಪೇಗೌಡನ ಪುರಕ್ಕೆ ಮಕ್ಕಳಾಗಿ ಬರಬೇಕು ಎನ್ನುತ್ತಾರೆ. ಧರೆಗೆ ದೊಡ್ಡವರು ಹಲವಾರು ನಾಮಕರಣವನ್ನು ಮಾಡಿಕೊಂಡು ಈಗ ಬೊಪ್ಪೇಗೌಡನ ಪುರಕ್ಕೆ ತಾವಾಗಿಯೇ ಬರುತ್ತಿದ್ದಾರೆ ಬಸವಚಾರಿ, ಮುದ್ದಮ್ಮ ಧರೆಗೆ ದೊಡ್ಡವರು ಕೊಟ್ಟ ಶಾಪಕ್ಕೆ ಮಾತ್ರ ತಪ್ಪಿಲ್ಲ, ಮೀರಿ ಬಾಳಿಲ್ಲ ನಿಡಘಟ್ಟ ಬಿಟ್ಟು ಆರು ಜನ ಗಂಡು ಮಕ್ಕಳನ್ನು ಸೇರಿ ಕಟ್ಟಿಕೊಂಡು ಮಾರೇಹಳ್ಳಿ ಮನಸ್ಥಾನಕ್ಕೆ ಬಂದು ಮಾರೇಹಳ್ಳಿ ಮನಸ್ಥಾನದಲ್ಲಿ ಸೇರಿ ಒಕ್ಕಲಾಗಿ ವಾಸಸ್ಥಾನ ಮಾಡುತ್ತಿದ್ದಾರೆ ಈಗ ಮಾರೇಹಳ್ಳಿಗೆ ವಾಸಕ್ಕೆ ಬಂದ ಮೇಲೆ ಬಸವಚಾರಿ ಮತ್ತು ಮುದ್ದಮ್ಮನಿಗೆ ಒಂದು ಗಂಡು ಮಗು ಜನಿಸುತ್ತದೆ. ಆ ಮಗನ ಅಂದ–ಚೆಂದಾ ರೂಪು ರೇಖೆ ಕಣ್ಣಾರೆ ನೋಡಿಬುಟ್ಟು ಮಗ ಹುಟ್ಟಿದ ಮೂರು ದಿನಕ್ಕೆ ಆ ಮಗುವಿಗೆ ಕೆಂಪಾಚಾರಿ ಅಂತ ನಾಮಕರಣ ಮಾಡುತ್ತಾರೆ.

ಮೂರು ದಿವಸಕೆ ಮಗುವಿಗೆ ನಾಮಕರಣ ಮಾಡಿದ ಏಳು ದಿವಸಕೆ ಅವರಿಗೆ ಮಡಿಕೆ ತುಂಬಾ ಹಣ ಆಗುತ್ತದೆ ಮೊರದ ತುಂಬಾ ಬಂಗಾರವಾಗುತ್ತದೆ.

ಈ ರೀತಿಯಾಗಿ ಅವರು ಕೆಂಪಾಚಾರಿ ಹುಟ್ಟಿದ ಮೇಲೆ ಮಾರೇಹಳ್ಳಿ ಗ್ರಾಮದಲ್ಲಿ ಬಹಳ ಶ್ರೀಮಂತರಾಗಿ ಬಾಳುವೆ ಮಾಡುತ್ತಿದ್ದಾರೆ. ಈ ರೀತಿ ಬಾಳುವೆ ಮಾಡುವಾಗ ಅವರ ಮನೆಯಲ್ಲಿ ಸಾಲಟ್ಟಿ ದನಗಳು ಇದ್ದಾವೆ. ಸಾಲಟ್ಟಿ ಕುರಿಗಳು ಇದ್ದಾವೆ. ಸಾಲಟ್ಟಿ ಆಡುಗಳು ಮತ್ತು ಅವರು ಕಣ್ಣು ನೋಡುವವವರೆವಿಗೂ ಜಾಗರಿ ಜಮೀನು ಆಗಿತ್ತಂತೆ ಈ ರೀತಿಯಾಗಿ ಅವರು ಮಾರೇಹಳ್ಳಿ ಗ್ರಾಮಕ್ಕೆ ಅವರು ಬಹಳ ಪುಣ್ಯವಂತರಾಗಿ ಬಾಳಿ ಬದುಕುತ್ತಿದ್ದಾರೆ, ಈಗೆ ಬಸವಚಾರಿ ಮತ್ತು ಮುದ್ದಮ್ಮ ಮಾರೇಹಳ್ಳಿಯಲ್ಲಿ ಬಹಳ ಸಿರಿವಂತರಾಗಿ ಬಾಳುವೆ ಮಾಡುವಾಗ ಆಗ ಧರೆಗೆ ದೊಡ್ಡವರು ರಾಜಬೊಪ್ಪೇಗೌಡನ ಪುರಕ್ಕೆ ಬಂದು ಹುಲಿ ಚರ್ಮ ಹಾಸಿಕೊಂಡು ಉಲ್ಲೆ ಚರ್ಮ ತೆಗೆದು ಬೆನ್ನಿಂದ ಬಿಟ್ಟುಕೊಂಡು ಭಾರಿ ಖಂಡಾಯ ತೆಗೆದು ಜಡಿದು ಭೂಮಿಗೆ ನೆಡುತ್ತಾರೆ. ಆಮೇಲೆ ಅವರು ಉರಿಯಗದ್ದಿಗೆಯ ಮೇಲೆ ಬಂದು ಕುಳಿತು ಕೊಂಡಿದ್ದಾರೆ. ಈಗ ಉರಿಗದ್ದಿಗೆಯ ಮೇಲೆ ಕುಳಿತುಕೊಂಡು ಪಾತಾಳ ಜ್ಯೋತಿಯವರು ಮಗಳಾದ ಮುತ್ತಿನ ದೊಡ್ಡಮ್ಮ ತಾಯಿಯನ್ನ ಯಾವ ರೀತಿ ಕರೆಯುತ್ತಾರೆ ಅಂದರೆ ನನ್ನ ದೊಡ್ಡವರ ಮನೆಯ ದುಡುವುಳ್ಳ ದೊಡ್ಡಮ್ಮ ಬಾವ್ವ ಬಾರೆ ಶಿಶು ಮಗಳೆ, ನನ್ನ ಮಠ ಮನೆಗೆ ಓಡಿಬಾವ್ವ ಎಂದು ಕರೆಯುತ್ತಾರೆ ಧರೆಗೆ ದೊಡ್ಡವರು ಕೂಗಿದ ಮಾತು ಕೇಳಿ ಮುದ್ದನಹಳ್ಳಿ ತೋಪಿನಲ್ಲಿ ಮುಟ್ಟಾಗಿ ವರಗಿದ್ದಂತಹ ದೊಡ್ಡಮ್ಮ ತಾಯಿ ತುಂಬಿದ ಸೋಮವಾರ ದಿವಸ ನನ್ನ ಸಾಕಿದ ತಂದೆ ಕರೆದರಲ್ಲೋ ಅಂತ ಹೋಗಬೇಕು ಎಂದು ಅವಳು ಸ್ನಾನ ಮಾಡಿಕೊಂಡು ಸಣ್ಣ ಬಟ್ಟೆಯ ಉಟ್ಟಿಕೊಂಡು ಧರೆಗೆ ದೊಡ್ಡವರು ಬಳಿಗೆ ಓಡಿ-ಓಡಿ ಬಂದು ಅವರಿಗೆ ಬಾಗಿ ಶರಣು ಮಾಡುತ್ತಾಳೆ. ಹಾಗೆಯೆ ಧರೆಗೆ ದೊಡ್ಡವರಿಗೆ ಸಾಂಬ್ರಾಣಿ ಬೆಳಗುತ್ತಾಳೆ ಆಗ ಕೈ ಜೋಡಿಸಿಕೊಂಡು ದುಂಡಿಗೆ ನಮಸ್ಕಾರ ಮಾಡಿಕೊಂಡು ದೊಡ್ಡಮ್ಮ ತಾಯಿ ಧರೆಗೆ ದೊಡ್ಡವರ ಮುಖವನ್ನ ದುರದುರನೆ ನೋಡುತ್ತಾಳೆ ಆಗ ದೊಡ್ಡಮ್ಮ ತಾಯಿ ನನ್ನ ಸಾಕುವಂತ ನನ್ನಪ್ಪ ನನ್ನ ಯಾವ ಕೆಲಸಕೆ ಕರೆದ್ರಿಯಪ್ಪ ಮಾಯಾಕರಾ ಅಂದಳಂತೆ.

ದೊಡ್ಡಮ್ಮ ನಾನು ನಿನ್ನನ್ನು ಕರೆದ ಕಾರಣವೇನೆಂದರೆ ಹೇಳುತ್ತೀನಿ ಕೇಳು ನನ್ನ ಕಂದ ಕಲ್ಯಾಣ ಕೈಲಾಸದ ನಡುವೆ ನರಲೋಕ ಈ ಪ್ರಪಂಚನೆ ಪಡೆದುಕೊಂಡು ಬಂದಿದದ್ದೇನೆ. ಆದಿ ಶಕ್ತಿಯ ಪಡೆದಿದ್ದೇನೆ ವಿಷ್ಣು, ಈಶ್ವರ, ಬ್ರಹ್ಮ ಈ ತ್ರಿಮೂರ್ತಿಗಳನ್ನು ಅಷ್ಟ ಕೋಟಿ ಜಂಗಮರನ್ನ ಪಡೆದುಕೊಂಡು ಈ ನರಲೋಕಕ್ಕೆ ನಾನು ಬಂದು ಅರವತ್ತು ವರ್ಷ ಕಳೆದು ಹೋಯ್ತು ಈಗ ನನಗೆ ಅರಳು ಮರಳು ಎನ್ನುವಂತ ಕಾಲ ಬಂದಾಗಿದೆ ನಾನು ಮೇಲಕೆ ಏಳಲಾರೆ, ಎದ್ದರೆ ಕೆಳಕೆ ಕೂರಲಾರೆ, ನನ್ನ ಖಂಡಾಯ ತೆಗೆದುಕೊಂಡು, ನನ್ನ ತಂಬೂರಿ ತೆಗೆದುಕೊಂಡು, ಬಸವನ ಹೊಡೆದುಕೊಂಡು ನಾನು ಯಾವುದಾದರೂ ಊರಿಗೆ ದಾನರೆ ಹೋಗಬೇಕು, ಯಾವುದಾದರು ಗ್ರಾಮದ ಭಿಕ್ಷಕೆ ಹೋಗಬೇಕು ನನಗೆ ಕಣ್ಣುಗಳು ಕಾಣುವುದಿಲ್ಲ ಎರಡು ಕಿವಿಗಳು ಕೇಳೋದಿಲ್ಲ. ನನಗೆ ದಾರಿ ಮಾರ್ಗ ಕಾಣೋದಿಲ್ಲ ನನಗೆ ಸೋಮವಾರ ಶುಕ್ರವಾರ ಪೂಜೆ ಮಾಡುವವರು ಯಾರು ಇಲ್ಲ. ನನಗೆ ಪುಷ್ಪಗಳನ್ನ ತರುವವರಿಲ್ಲ.

ಅಗ್ನಿ ತರುವವರಿಲ್ಲ ನನ್ನ ಮಠ ತೋಳೆಯುವವರು ಯಾರು ಇಲ್ಲ. ಖಂಡಾಯ ಬೆಳಗುವವರು ಯಾರು ಇಲ್ಲ ನಾನು ಮಲಗಿರುವ ಹುಲಿ ಚರ್ಮ ಮಡಿಸುವವರಿಲ್ಲ ಆದ್ದರಿಂದ ನಾನು ಈ ರಾಜ ಬೊಪ್ಪೇಗೌಡನ ಪುರದಲ್ಲಿ ನಾನು ವಾಸಸ್ಥಾನ ಮಾಡಬೇಕಾದರೆ ನನಗೆ ಸೋಮವಾರ, ಶುಕ್ರವಾರ ಪೂಜೆ ಮಾಡುವಂತಹ ಮಗನ ಪಡಿಯಬೇಕು ಖಂಡಾಯ ಬೆಳಗುವುದಕ್ಕೆ ಶಿಷ್ಯನಾಗಬೇಕು ಆದ್ದರಿಂದ ನಾನು ಒಬ್ಬ ಶಿಶು ಮಗನನ್ನು ಪಡೆಯಬೇಕು ಅನ್ನುತ್ತಾರೆ ಮುಂದೆ ನನಗೆ ಕೆಂಡ ತರುವುದಕೆ ಒಬ್ಬ ಗಂಡು ಮಗನ ಪಡೆಯಬೇಕಾದರೆ ನಾನು ಯಾವ ಗ್ರಾಮಕೆ ಹೋಗಬೇಕು ನಾನು ಯಾವ ಜಾತಿಯ ಒಳಗೆ ಮಗನ ಪಡೆಯಬೇಕು ಎಂದು ದೊಡ್ಡಮ್ಮನನ್ನು ಕೇಳುತ್ತಾರೆ ಈ ರೀತಿ ಕೇಳುತ್ತಾ ನನ್ನ ಪಾದಕೆ ಬೀರಿದ ಮಗನು ಎಲ್ಲಿ ಸಿಕ್ಕುತ್ತಾನೆ ನಾ ಕಾಣೆ ಯಾರ ಗರ್ಭದಲ್ಲಿ ಬೆಳೆದಾನೋ ಕಾಣೆನಲ್ಲಾ ದೊಡ್ಡಮ್ಮ ಈ ರೀತಿ ಚಿಂತಿಸುತ್ತಾ ಉರಿಗದ್ದಿಗೆಯ ಮೇಲೆ ಕುಳಿತುಕೊಂಡು ಮನಸ್ಸಿನಲ್ಲಿ ಕೊರಗುತ್ತಾ ದೊಡ್ಡಮ್ಮನನ್ನ ಕರೆದು ಬುದ್ಧಿ ವಿವೇಕ ಹೇಳುತ್ತಿದ್ದಾರೆ ಮಂಟೇದ ಲಿಂಗಯ್ಯನವರು.

ದೊಡ್ಡಮ್ಮ ಹೇಳುತ್ತಾರೆ ಈ ನರಲೋಕಕೆ ಹೋಗಿಬಿಟ್ಟು ನರಲೋಕದ ಮಗನನ್ನ ತೆಗೆದುಕೊಂಡು ಬಂದು ಶಿಶುಮಗನ ಮಾಡಿಕೊಳ್ಳಬೇಕು ಅಂತ ಕೇಳುತ್ತಿಯಲಪ್ಪ ಶಿಶು ಮಗನ ಮಾಡಿಕೊಳ್ಳಬೇಕು ಅಂತ ಕೇಳುತ್ತಿಯಲಪ್ಪ ಶಿಶು ಮಗ ಅಂದರೆ ಯಾವ ಶಿಶು ಮಗ ಇದ್ದಾನಪ್ಪ ಎಂದೂ ಹೇಳುತ್ತಾಳೆ.

ಮಂಟೇ ಸ್ವಾಮಿಯವರು ನನಗೆ ತಂದೆ-ತಾಯಿ ಪಾದ ಪೂಜೆ ಮಾಡಿಕೊಂಡು ತಂದೆ-ತಾಯಿಯರನ್ನ ದೇವರೆಂದು ಪೂಜಿಸುವ ಮಗ ನನಗೆ ಶಿಶು ಮಗನಾಗಬೇಕೆಂದು ಹೇಳುತ್ತಾ ಅಂತ ಮಗ ಎಲ್ಲಿ ಇದ್ದಾನೊ ಗೊತ್ತಿಲ್ಲ ಯಾವ ಸ್ಥಳದಲ್ಲಿ ಬೆಳೆಯುತ್ತಿದ್ದಾನೊ ಅಂತ ಹೇಳಿ ಇಂತಹ ತಂದೆ-ತಾಯಿ ಪೂಜೆ ಮಾಡುವ ಮಗನ ಪಡೆಯಬೇಕು ಎಂದು ಹೇಳಿ ಉರಿಗದ್ದಿಗೆಯ ಮೇಲೆ ಕುಳಿತುಕೊಂಡು ನಾಲ್ಕು ದಿಕ್ಕುಗಳಿಗೆ ದೃಷ್ಟಿ ಮಡಗುತ್ತಾರೆ.

ಈ ರೀತಿಯಾಗಿ ನಾಲ್ಕು ದಿಕ್ಕುಗಳಿಗೂ ದೃಷ್ಟಿ ಮಡಗಿ ಧರೆಗೆ ದೊಡ್ಡವರು ದೊಡ್ಡಮ್ಮ ತಾಯಿಗೆ ಹೇಳುತ್ತಾರೆ ಏನೆಂದರೆ ದೊಡ್ಡಮ್ಮ ನಾನು ಮರೆತುಹೋಗಿಬಿಟ್ಟಿದೆ ಕಲ್ಯಾಣ ಪಟ್ಟಣದಲಿ ಬಸವಣ್ಣನವರ ಭಕ್ತಿ, ಸತ್ಯ ಏನು ಅಂತ ನೋಡಿಕೊಂಡು ಬಸವಣ್ಣನಿಗೆ ವರಕೊಟ್ಟ ಕಲ್ಯಾಣ ಪಟ್ಟಣ ಬಿಟ್ಟು ಬರುವಾಗ ಕಲ್ಯಾಣ ಕಡೆ ಕೈಲಾಸದ ಬಾಗಿಲಲ್ಲಿ ಲಿಂಗ ಜಂಗಮಕೆ ಸೇರಿದ ಮಗ ಬಸವಲಿಂಗಯ್ಯ ಎನುವಂತ ಶಿಶು ಮಗ ಈ ಕಲ್ಯಾಣ ಪಟ್ಟಣದ ಕಡೆ ಬಾಗಿಲಲ್ಲಿ ವಾಸವಾಗಿದ್ದ ಅವನನ್ನು ನಾನು ತೆಗೆದುಕೊಂಡು ಬಂದು ಬಸವಚಾರಿ, ಮುದ್ದಮ್ಮನ ಹೊಟ್ಟೆಗೆ ಹಾಕಿದ್ದೇನೆ ಎಂದೂ ದೊಡ್ಡಮ್ಮನಿಗೆ ಹೇಳುತ್ತಾರೆ. ಆಗ ದೊಡ್ಡಮ್ಮ ಅವರು ವಾಸ ಮಾಡುವಂತ ಸ್ಥಳ ಯಾವುದು ಗುರುವೆ ಎಂದೂ ಕೇಳುತ್ತಾಳೆ. ಧರೆಗೆ ದೊಡ್ಡವರು ಹೇಳುತ್ತಾರೆ ಅವರು

ಹುಟ್ಟಿದ್ದು ನಿಡಘಟ್ಟ ಬೆಳೆದದ್ದು ಮಳವಳ್ಳಿ ಗ್ರಾಮದ ಮಾರೇಹಳ್ಳಿಯಲ್ಲಿ ಅಂತ ಹೇಳುತ್ತಾರೆ ಈ ರೀತಿಯಾಗಿ ಕೆಂಪಚಾರಿ ಹುಟ್ಟಿದ ಮೇಲೆ ಅವರ ಬಾಳು ತುಂಬಾ ಚೆಂದಾಗಿ ಆಗಿದೆ. ತಂಬಾ ಚೆನ್ನಾಗಿ ಬಾಳಿ ಬದುಕುತ್ತಿದ್ದಾರೆ. ಅವರು ತುಂಬಾ ಪುಣ್ಯವಂತರಾಗಿ ಸ್ಥಿತಿವಂತರಾಗಿ ಲಕ್ಷ್ಮೀಕರಾಗಿ ಬಾಳಿ ಬದುಕುತ್ತಿದ್ದಾರೆ ದೊಡ್ಡಮ್ಮ ಇಂತವರ ಮನೆಗೆ ನಾನು ಭಿಕ್ಷುಕನಾಗಿ ಹೋಗಬೇಕು ಇವರ ಅರಮನೆಗೆ ತಿರುಕನಾಗಿ ಹೋಗಬೇಕು ದೊಡ್ಡಮ್ಮ ಅಂತಹೇಳಿ ಅವರಿಗೆ ನಾನು ಎಲ್ಲಾ ಐಶ್ವರ್ಯ, ಭಾಗ್ಯವನ್ನ ಕೊಟ್ಟಿದ್ದೇನೆ. ಈಗ ನಾನು ಹೋಗಿ ಗಂಡ ಹೆಂಡಿರ ಭಕ್ತಿಯನ್ನು ನಾನು ನೋಡಲೇಬೇಕು ನೋಡಿದ ಮೇಲೆ ನಾನು ಬಸವಚಾರಿ ಮತ್ತು ಮುದ್ದಮ್ಮನ ಏಳನೇ ಮಗನನ್ನು ಕೆಂಪಚಾರಿಯನ್ನ ದತ್ತು ಮಗನಾಗಿ ನಾನು ಪಡೆಯಬೇಕು ಅಂತ ಹೇಳುತ್ತಾರೆ. ಆಗ ದೊಡ್ಡಮ್ಮ ತಾಯಿ ಹೇಳುತ್ತಾರೆ ಆ ಮಗ ಹುಟ್ಟಿದ ಮೇಲೆ ಅವರು ತುಂಬಾ ಐಶ್ವರ್ಯರಾಗಿ ಬಾಳುತ್ತಿದ್ದಾರೆ ಅಂತಹ ಮಗನನ್ನೇ ಯಾರಾದರೂ ಕೊಡುತ್ತಾರೆಯೇ ಎಂದು ಧರೆಗೆ ದೊಡ್ಡವರಿಗೆ ಹೇಳುತ್ತಾರೆ.

ಧರೆಗೆ ದೊಡ್ಡವರು ಹೇಳುತ್ತಾರೆ ನನಗೆ ಆ ಕೆಂಪಾಚಾರಿಯನ್ನು ಶಿಶು ಮಗನಾಗಿ ಕಡಲಲ್ಲಿ ಅಂದರೆ ನಾನು ಅವರಿಗೆ ತುಂಬಾ ಕಷ್ಟಕೊಟ್ಟ ಆ ಮಗನನ್ನ ಕರೆದುಕೊಂಡು ಬರುತ್ತೇನೆ ಎಂದು ಹೇಳಿ ಮತ್ತು ಅವರು ನಾನು ಕೆಂಪಾಚಾರಿಯನ್ನ ಶಿಶು ಮಗನಾಗಿ ಕೊಡಿ ಎಂದು ಭಿಕ್ಷೆ ಕೇಳಿದ ತಕ್ಷಣ ನನಗೆ ಕೆಂಪಚಾರಿಯನ್ನ ಕೊಟ್ಟರೆ ನಾನು ಅವರಿಗೆ ಈಗ ಕೊಟ್ಟಿರುವ ಭಾಗ್ಯವಲ್ಲ ಇನ್ನೂ ಹೆಚ್ಚು ಭಾಗ್ಯವನ್ನ ಕೊಟ್ಟು ಬರುತ್ತೇನೆ ಎಂದು ದೊಡ್ಡಮ್ಮನಿಗೆ ಹೇಳುತ್ತಾರೆ. ಈ ರೀತಿಯಾಗಿ ಅವರು ಮಾರೇಹಳ್ಳಿ ಗ್ರಾಮಕ್ಕೆ ಬರುವಾಗ ಬಿರುದು ಲಾಂಛನಗಳನ್ನು ಹೊತ್ತುಕೊಂಡು, ನೂರೊಂದು ಬಿರುದುಗಳನ್ನು ದೇಹದಲ್ಲಿ ಧರಿಸಿಕೊಂಡು ಅಪ್ಪು ಖಂಡುಗ ಜೋಳಿಗೆ, ತ್ರಿಶೂಲ ತಾಮ್ರದ ಶಾಸನಗಳು ಮತ್ತು ಹುಲಿ ಚರ್ಮವನ್ನು ಉಟ್ಟುಕೊಂಡು ಜಿಂಕೆ ಚರ್ಮವನ್ನು ಬೆನ್ನಿನ ಹಿಂದೆ ಬಿಟ್ಟುಕೊಂಡು ಅವರ ಹಣೆಯಲ್ಲಿ ವಿಭೂತಿ ಹಾಕಿಕೊಂಡು ರುದ್ರಾಕ್ಷಿಯ ಸರವನ್ನ ಕೊರಳಿಗೆ ಕಟ್ಟಿಕೊಂಡು ಅವರು ಎಪ್ಪತ್ತು ಮಾರುದ್ದದ ಜಡೆಯ ಬಿಚ್ಚಿ ತಾವು ಹೊದ್ದುಕೊಂಡು ಧರಧರನೆ ಎಳೆದುಕೊಂಡು ಅವರು ಜಾಗಟೆಯ ಹಿಡಿದುಕೊಂಡು ಮತ್ತು ಮುಳ್ಳಿನ ಪವಾಡ ಧರಿಸಿಕೊಂಡು ಈಗ ಧರೆಗೆದೊಡ್ಡವರು ರಾಜ ಬೊಪ್ಪನಗೌಡನ ಪುರವ ಬಿಟ್ಟು ನಾನು ಮಾರೇಹಳ್ಳಿ ಗ್ರಾಮಕ್ಕೆ ಹೋಗಿ ಬರುತ್ತೇನೆ ದೊಡ್ಡಮ್ಮ ನಿನಗೆ ಮುತ್ತೈದೆ ಭಾಗ್ಯ ಶುಭವಾಗಲಿ ಮಗಳೇ ಅಂತ ಹೇಳಿ ದೊಡ್ಡಮ್ಮ ತಾಯಿಗೆ ಆರ್ಶೀವಾದ ಮಾಡಿ ಮಾರೇಹಳ್ಳಿಗೆ ದಯಮಾಡಿಸುತ್ತಾರೆ.

ಅವರು ಬರುವಾಗ ಅವರಿಗೆ ಸರಿಯಾಗಿ ಕಣ್ಣು ಕಾಣಿಸುತ್ತಿಲ್ಲ ಮಾರ್ಗ ಕಾಣಿಸುತ್ತಿಲ್ಲ ಊರು ಗೊತ್ತಾಗುತ್ತಿಲ್ಲ ಮನೆಗಳ ನೆನಪು ಸರಿಯಾಗಿ ತಿಳಿಯುತ್ತಿಲ್ಲ ಅಂತ ಹೇಳಿ ಬಹಳ ದೃಷ್ಟಿ ಮಾಡಿಕೊಂಡು ನಾನು ಮಾರೇಹಳ್ಳಿಗೆ ಯಾವ ಮಾರ್ಗದಲ್ಲಿ ಹೋಗಬೇಕು ಅಂತಹೇಳಿ ಅವರು ದಬ್ಬಳ್ಳಿ ದಾಸನಾಯಕನ ದೊಡ್ಡಿ ಮಾರ್ಗವಾಗಿ

ಬರುತ್ತಿದ್ದಾರೆ. ಈ ರೀತಿಯಾಗಿ ಬರುವಾಗ ಧರೆಗೆ ದೊಡ್ಡವರು ಚೊಟ್ಟನಹಳ್ಳಿ, ಚೋರನಹಳ್ಳಿ ಎಡಕ್ಕೆ ಬಿಟ್ಟುಕೊಂಡು, ಬೆಟ್ಟನಹಳ್ಳಿ, ಬೇವಿನಹಳ್ಳಿ, ಬಲಕ್ಕೆ ಬಿಟ್ಟುಕೊಂಡು ಗುರುವು ತೊರೆಕಾಡನಹಳ್ಳಿಯನ್ನು ಈಶಾನ್ಯ ದಿಕ್ಕಿಗೆ ಬಿಟ್ಟು ಅವರು ಮಳವಳ್ಳಿ ಗ್ರಾಮಕ್ಕೆ ದಯಮಾಡಿಸಿ ಆ ಮೇಲೆ ಮಾರೇಹಳ್ಳಿ ಮನಸ್ತನಕ್ಕೆ ದೇವರು ದಯ ಮಾಡುತ್ತಾರೆ.

ಈ ರೀತಿಯಾಗಿ ಮಾರೇಹಳ್ಳಿ ಶಿವಭಕ್ತರ ಮಠ ಮನೆಗೆ ಬಂದು ಅಲ್ಲಿ ಮನೆ-ಮನೆಗಳಿಗೆ ಹೋಗಿ ಭಿಕ್ಷೆ ಮಾಡಿಕೊಂಡು ಮುತ್ತಿನ ಜೋಳಿಗೆಗೆ ದಾನ, ಧರ್ಮ, ಭಿಕ್ಷೆ ಈಸಿಕೊಂಡು ಭೂಮಿ ತೂಕದ ಜೋಳಿಗೆ ತುಂಬಿಸಿಕೊಂಡು ಮುಂಗೈಲಿ ಹಾಕಿಕೊಂಡು ಈಗ ಮಂಟೇಸ್ವಾಮಿಯವರು ಮುದ್ದಮ್ಮನ ಮನೆಗೆ ದಯ ಮಾಡಿಸುತ್ತಾರೆ.

ಮಂಟೇಸ್ವಾಮಿಯವರು ಬಸವಚಾರಿ ಮನೆಗೆ ಬಂದು ಉತ್ತರದೇಶದ ಖಂಡಾಯ ಹೆಗಲ ಮೇಲೆ ಹೊತ್ತುಕೊಂಡು ಬಾರಿಸುವಂತ ತಂಬೂರಿ ತೆಗೆದು ಎದೆಯ ಮೇಲೆ ಧರಿಸಿಕೊಂಡು ಎಪ್ಪತ್ತು ಮಾರುದ್ದ ಜಡೆಗಳ ಸುತ್ತ ಬಿಟ್ಟುಕೊಂಡು ಧರೆಗೆ ದೊಡ್ಡವರು ಕೈಯಲ್ಲಿ ಜಾಗಟೆ ಹಿಡಿದುಕೊಂಡು ಮುಳ್ಳಿನ ಪವಾಡದ ಮೇಲೆ ನಿಂತಿಕೊಂಡು ಅವರು ಬಾಳುವವರ ಬಾಳಾಟವನ್ನೆಲ್ಲ ಕಣ್ಣಾರೆ ನೋಡುತ್ತಾರೆ.

ಈ ರೀತಿಯಾಗಿ ಕಣ್ಣಿಂದ ನೋಡಿಕೊಂಡು ಬಹಳ ಸಂತೋಷ ಪಟ್ಟುಕೊಂಡು ಧರೆಗೆ ದೊಡ್ಡವರು ನಡು ತೊಟಿಯ ಒಳಗೆ ನಿಂತಿದ್ದರು. ಅದೇ ಹೊತ್ತಿನಲ್ಲಿ ಬಸವಚಾರಿ ಮತ್ತು ಮುದ್ದಮ್ಮ ಭಾಗ್ಯವುಳ್ಳ ಮಗನಾದ ಕಿರು ಕೆಂಪಣ್ಣ ಈಗ ಕುಲುಮೆ ಕಾರ್ಖಾನೆಯಿಂದ ಬರುವ ಹೊತ್ತಾಯ್ತು ಈಗ ನನ್ನ ಭಾಗ್ಯವುಳ್ಳ ಮಗನಿಗೆ ಹಾಲು ಕೊಡಬೇಕು ಅಂತಹೇಳಿ ಮುದ್ದಮ್ಮ ಹೋಗಿ ಹಸುವಿನಿಂದ ಹಾಲನ್ನ ಕರಿಯುತ್ತಾಳೆ ಹಾಲು ಕರಿಯುವಂತ ಮುದ್ದಮ್ಮನನ್ನ ಧರೆಗೆ ದೊಡ್ಡವರು ನೋಡಿ ಬಹಳ ಸಂತೋಷ ಪಟ್ಟಕೊಂಡು ಆಗ ಕೆಂಪಣ್ಣ ಹಾಲು ಕುಡಿದು ಬಾಳುತ್ತಿದ್ದಾನೆ. ಧರೆಗೆ ದೊಡ್ಡವರು ಕೆಂಪಚಾರಿಯನ್ನು ನೋಡಿ ಬಹಳ ಸಂತೋಷಗೊಂಡು ಈಗ ನಾನು ಬಂದು ಬಹಳ ಹೊತ್ತಾಯ್ತು ನಾನು ಈಗ ದಾನ, ಧರ್ಮ, ಭಿಕ್ಷೆ ಸಾರಬೇಕು ಅಂತೇಳಿ ಬಸವಚಾರಿ ಮನೆ ಒಳಗೆ ಹೋಗಿ ಧರೆಗೆ ದೊಡ್ಡವರು ಭಿಕ್ಷೆ ಕೇಳುತ್ತಿದ್ದಾರೆ.

ಧರೆಗೆ ದೊಡ್ಡವರು ಭಿಕ್ಷೆ ಕೊಟ್ಟವರಿಗೆ ಲಕ್ಷ ಭಾಗ್ಯವಾಗಲೀ ದಾನ ಕೊಟ್ಟವರಿಗೆ ಜೋಳಿಗೆ ಹೊನ್ನಾಗಲಿ ಎಂದು ಭಿಕ್ಷೆಯನ್ನ ಕೇಳುತ್ತಿರುವಾಗ ಮನೆಯಲ್ಲಿದ್ದ ತಾಯಿ ಮುದ್ದಮ್ಮನವರಿಗೆ ದಾನವೆಂದರೆ ಜ್ಞಾನವಿಲ್ಲ, ಭಿಕ್ಷೆ ಅಂದರೆ ಲಕ್ಷ್ಯವಿಲ್ಲ, ಆಗ, ಧರೆಗೆ ದೊಡ್ಡವರು ಹಿಂದಿನ ಪಾದ ತೆಗೆದು ಮುಂದಕ್ಕೆ ಊಡಗುವರೇ ಮುಂದಿನ ಪಾದವನ್ನ ತೆಗೆದು ಹಿಂದಕ್ಕೆ ಮಡಗುವರೇ ಈ ರೀತಿ ಬರುವಾಗ ಮುದ್ದಮ್ಮ ಕರಿವಂತ ಹಸುವು ಗುರುವು ಬಂದ ತಕ್ಷಣ ಬೆದರುತ್ತದೆ. ಹಸು ಬೆದರಿದ ತಕ್ಷಣ ಹಾಲು ಹಂಡೆ ಚೆಲ್ಲೋಯ್ತು, ಅವಳ ತಲೆ ಕಿತ್ತೋಯ್ತು, ಅವಳ ಕೈ ತರಚೊಯ್ತು, ಅವಳ ಕೈಯಲ್ಲಿದ್ದ ಬಳೆ ಹೊಡೆದು ಹೋದವು, ಅವಳು ಬಲಗಡೆ ಬೀಳುತ್ತಾಳೆ ಎಡಗಡೆ ಏಳುತ್ತಾಳೆ. ಬಿದ್ದ

ತಕ್ಷಣ ಮುದ್ದಮ್ಮನಿಗೆ ಬಹಳ ಕೋಪಬಂತು ಬಂದಾಕ್ಷಣ ಅವಳು ಬಾಯಿಗೆ ಬಂದ ಹಾಗೆ ಬೈಯುತ್ತಾಳೆ. ಅವಳು ಯಾವ ರೀತಿ ಬೈಯುತ್ತಿದ್ದಾಳೆ ಅಂದರೆ ಲೋ ಎತ್ತಲಿಂದ ಬಂದೋ ನೀನು ಹುಚ್ಚ ಕಾಡ ಪರದೇಸಿ ಭಿಕ್ಷೆ ಮಾಡವನೇ ತಿರ್ಕಂಡು ತಿನ್ನವನೇ ಈ ಭಿಕ್ಷೆ ಮಾಡೋ ಮುಂಡೆ ಮಕ್ಕಳಿಗೆ ಹೊತ್ತು ಗೊತ್ತು ಒಂದು ಇಲ್ಲ ಎಂದು ಬೈಯುತ್ತಿದ್ದಾಳೆ ಬಾಯಿಗೆ ಬಂದ ಹಾಗೆ ಬೈದು ನನ್ನ ಮಗನಿಗೆ ನಿನ್ನಿಂದ ಹಾಲು ಇಲ್ಲದಾಯಿತು. ನೀನು ಈಗ ನನ್ನ ಮನೆಬಿಟ್ಟು ಆಚೆಗೆ ಹೋಗು ಪರದೇಶಿ ಎಂದು ಮುದ್ದಮ್ಮ ಎಕ್ಕತ್ತಿನ ಮೇಲೆ ಕೈಹಾಕಿ ನೂಕುತ್ತಾಳೆ.

ಮುದ್ದಮ್ಮ ಎಷ್ಟೆ ನೂಕಿದರು ಧರೆಗೆ ದೊಡ್ವರು ಪಾದವನ್ನ ಮುಂದಕ್ಕೆ ಮಡಗಲಿಲ್ಲ ಮುಂದಿನ ಪಾದವನ್ನ ಹಿಂದಕ್ಕೆ ಮಡಗಲಿಲ್ಲ. ಆಗ ಮಂಟೇಸ್ವಾಮಿಯವರು ಮುದ್ದಮ್ಮ ಮನೆಯ ಗೋಡೆಯನ್ನ ವರೀಕೊಂಡು ನಿಂತಿದ್ದಾರೆ. ಧರೆಗೆ ದೊಡ್ಡವರು ಮುದ್ದಮ್ಮನಿಗೆ ನೀನೆ ಅಂದರೂ, ನೀನು ಏನೇ ಮಾಡಿದರೂ ನನಗೆ ಕೋಪವಿಲ್ಲ ಬೇಧವಿಲ್ಲ ಎಂದರಂತೆ ಅಮ್ಮ ನಾನ್ನು ಕಲ್ಲೆತ್ತಿ ಹೊಡೆಯುವವರ ಕಂಡರೆ ಕೈ ಎತ್ತಿ ಮುಗಿಯುತ್ತೀನಿ ನಾಳೆ ದಿವಸ ನಿಮ್ಮ ನಿಮ್ಮ ಭಕ್ತಿ ನೋಡಿಕೊಂಡು ನಿಮ್ಮ ಮನೆಗೆ ಮಾರಿ ಕರೆದು ನಿಮ್ಮ ಮನೆಗೆ ಕೊಡುತ್ತೀನಿ ಅಂತ ಹೇಳಿ ಮುದ್ದಮ್ಮ ನೀನು ಬಹಳ ಜ್ಞಾನವಾಗಿ ಕೇಳು ತಾಯಿ ಮುದ್ದಮ್ಮನ ಜೊತೆಗೆ ಮಾತಾಡುತ್ತಾರೆ ಧರೆಗೆ ದೊಡ್ಡವರ ಮುಖವ ಮಟಮಟನೇ ನೋಡುತ್ತಾ ನಿಂತವಳೇ ಮುದ್ದಮ್ಮನಿಗೆ ಹಿಂದಿನ ಎಲ್ಲಾ ವಿಷಯಗಳನ್ನು ಧರೆಗೆ ದೊಡ್ಡವರು ಹೇಳುತ್ತಾರೆ ನಿನಗೆ ಭಾಗ್ಯವನ್ನು ಕೊಟ್ಟ ನಿನ್ನ ಬಾಗಿಲಿಗೆ ಬಂದು ನಿಂತಿದ್ದೇನೆ. ನಿನ್ನ ಸಿರಿ ಸಂಪತ್ತಿನ ಬಗ್ಗೆ ಎಲ್ಲಾ ಹೇಳಿದ್ದೇನೆ ಈಗಲಾದರೂ ದಾನ ಧರ್ಮ ನೀಡು ಮಗಳೇ ಎಂದಾಕ್ಷಣ ಬಸವಯ್ಯನ ಮಡದಿ ಮುದ್ದಮ್ಮ ಧರೆಗೆ ದೊಡ್ಡವರ ಮಾತುಕೇಳಿ ಬಹಳ ಚಿಂತೆಗೆ ಒಳಗಾಗುತ್ತಾಳೆ. ಆಗ ಅವಳು ತನ್ನ ಅಟ್ಟ ಅರಮನೆಗೆ ಓಡೋಡಿ ಬಂದು ಸ್ನಾನ ಮಡಿ ಮಾಡಿಕೊಂಡು, ಮಡಿ ಸೀರೆ ಉಟ್ಟುಕೊಂಡು ಮೊರ ತೆಗೆದುಕೊಂಡು, ಮೊರದ ಒಳಗೆ ಮುತ್ತು ರತ್ನ ಬೆಳ್ಳಿ ಬಂಗಾರ ತೆಗೆದುಕೊಂಡು ಮುದ್ದಮ್ಮ ಕೆಂಡದ ಮೇಲೆ ಮಡ್ಡಿ ಧೂಪಕೂಡ ಸುಟ್ಟುಕೊಂಡು ಧೂಪ ಸಾಂಬ್ರಾಣಿ ಸಹಿತವಾಗಿ ಬಹಳ ಭಕ್ತಿ, ಮರ್ಯಾದೆಯಿಂದ ದಾನ ಧರ್ಮ ತರುತ್ತಾಳೆ.

ದಾನ ಧರ್ಮ ಭಿಕ್ಷೆ ತರುವಂತ ಮುದ್ದಮ್ಮನನ್ನ ಕಣ್ಣಿಂದ ನೋಡಿ ಧರೆಗೆ ದೊಡ್ಡವರು. ತುಂಬಿ ಕಲ್ಲಿನ ಮೇಲೆ ನಿಂತವರು ನಿಂತುಕೊಂಡು ಮುದ್ದಮ್ಮ ನೀನು ತೆಗೆದುಕೊಂಡು ಬಂದ ಈ ಮುತ್ತು ರತ್ನ ಬೆಳ್ಳಿ ಬಂಗಾರವನ್ನ ಈವತ್ತು ತುಂಬಿದ ಸೋಮವಾರ ಮುದ್ದಮ್ಮ ಜಂಗಮನಲ್ಲಿ ನನಗೆ ನಿನ್ನಟ್ಟಿ ಅರಮನೆಯೊಳಗ ದಾನ ದಾನಕ್ಕಿಂತ ಮುದ್ದಮ್ಮ ಹೆಚ್ಚಿನ ದಾನ ಹೆಚ್ಚಿನ ಭಾಗ್ಯ ಇದೆ ಆ ಹೆಚ್ಚಿನ ಮುತ್ತಿನ ಜೋಳಿಗೆಗೆ ಆ ಭಾಗ್ಯವ ನೀಡು ಮಗಳೆ ಆ ಭಾಗ್ಯ ಯಾವುದೆಂದರೆ ಅವ್ವಾ ಮಾತಾನಾಡುವ ಭಾಗ್ಯ ತಂದು ಜೋಳಿಗೆ ದಾನ ನೀಡು ಮಗಳೇ ಎಂದರಂತೆ ಈ

ಮಾತನ್ನು ಕೇಳಿ ಮುದ್ದಮ್ಮನಿಗೆ ಆ ಮಾತಿನ ಅರ್ಥವೇ ಆಗುವುದಿಲ್ಲ ಆಗ ಗುರುವೇ ಬಿಡಿಸಿ ಹೇಳಪ್ಪ ನಾ ತಂದು ದಾನ ಕೊಡುತ್ತೀನಿ ಎನ್ನುತ್ತಾಳೆ. ಆಗ ಧರೆಗೆ ದೊಡ್ಡವರು ಹೇಳುತ್ತೀನಿ ಕೇಳು ತಾಯಿ ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಏಳು ಜನ ಮಕ್ಕಳಲ್ಲಿ ಆರು ಮಕ್ಕಳನ್ನೆ ನೀನೇ ಮಡಿಕವ್ವ ನನಗೆ ಭಾಗ್ಯವುಳ್ಳ ಬಂಗಾರದ ಗೊಂಬೆ ಲಕ್ಷ್ಮಿಪುತ್ರ ನನ್ನ ಕೆಂಪಾಚಾರಿಯನ್ನ ನನಗೆ ದತ್ತು ಮಗನಾಗಿ ಕೊಡು ತಾಯಿ ಎಂದು ಮುದ್ದಮ್ಮನಿಗೆ ಧರೆಗೆ ದೊಡ್ಡವರು ಕೇಳುತ್ತಾರೆ. ನೀನು ಆ ಕೆಂಪಚಾರಿಯನ್ನ ನನಗೆ ದತ್ತು ಮಗನಾಗಿ ಕೊಟ್ಟರೆ ನಿಮಗೆ ಇನ್ನಿಷ್ಟು ಭಾಗ್ಯವ ಕೊಡುತ್ತೇನೆ. ಆದರೆ ನಿನ್ನ ಮಗನ ಕೊಡುತ್ತೀಯಾ ಇಲ್ಲವೋ ಹೇಳಿ ಮಗಳೇ ಅಂದರಂತೆ. ಈ ಮಾತನ್ನ ಕೇಲಿ ಮುದ್ದಮ್ಮ ಅವಳು ತಂದಿರುವ ದಾನದ ಭಿಕ್ಷೆಯನ್ನು ಕೆಳಗಡೆ ಇಟ್ಟು ಬಹಳ ದುಃಖವನ್ನು ಪಡುತ್ತಾಳೆ ಮುದ್ದಮ್ಮ ಹೇಳುತ್ತಾಳೆ ಗುರುವೇ ನನ್ನ ಅಂಗಳದಲ್ಲಿ ಆಡಿಕೊಂಡಿರುವ ವಂತಹ ಅರಗಿಣಿಯನ್ನು ಕೇಳಬಹುದಾ ಜಂಗಮ ಈ ನನ್ನ ಮಗನ ಬಾಯಿಬಿಟ್ಟ ಕೇಳುಬಿಟ್ಟೆಯಲ್ಲ.

ನನ್ನ ಮಗನ ಸುದ್ದಿಯೆತ್ತದಕ್ಕೆ ಎತ್ತಬಾರದಂತಹ ಹಾಗೆ ಹಾಕುತ್ತೀನಿ ಕೇಳು ನನ್ನ ಕೊಟ್ಟಿಗೆ ಬರ್ದು ಮಾಡಿ ನನ್ನ ಸಾಲಟ್ಟಿ ದನಗಳಿಗೆ ದೊಡ್ಡರೋಗ ಕೊಟ್ಟರೂ ಸರಿಯೇ, ಸಲಟ್ಟಿ ಆಡುಗಳಿಗೆ ಕಸರೇ ರೋಗ ದೇವ ನೀನು ಕೊಟ್ಟರೂ ಸರಿಯೇ, ನನ್ನ ಆರು ಜನ ಗಂಡು ಮಕ್ಕಳಿಗೆ ಹುಚ್ಚು ಹಿಡಿದುಕೊಂಡರೂ ಸರಿಯೇ ಮತ್ತು ನನ್ನ ಆರು ಜನ ಸೊಸೆಯಂದರಿಗೆ ಗಂಡು ಗಾಳಿ ಹಿಡಿದು ಕೊಂಡರೂ ಸರಿಯೇ, ಹಾಗೆಯೇ ಇಡೀ ನನ್ನ ಸಂಪತ್ತು ಮಣ್ಣಾದರೂ ಸರಿಯೇ ಜಂಗಮ ನಾನು ನನ್ನ ಮಗನ ಕೊಡುವುದಿಲ್ಲ ಅನ್ನುತ್ತಾರೆ.

ಮುದ್ದಮ್ಮನ ಮಾತು ಕೇಳಿ ಧರೆಗೆ ದೊಡ್ಡವರು ಶಿವಾ ಶಿವಾ ಎನ್ನುತ್ತಾ ಎರಡು ನೇತ್ರ ಮುಚ್ಚಿಕೊಂಡು ಕಿವಿಯನ್ನು ಸಹ ಮುಚ್ಚಿಕೊಂಡು ಖಂಡಿತವಾಗಿ ನನ್ನ ಮಗನ ಕೇಳಬ್ಯಾಡಿ ಹೊರಟು ಹೋಗಿ ಅಂದಳಲ್ಲ ಅಂತಹೇಳಿ ಮಂಟೇಸ್ವಾಮಿ ತಾಯಿ ನನಗೆ ಕೊಡದೆ ಹೋದರೂ ಪರವಾಗಿಲ್ಲ ಯಮ ಬಂದು ಕೇಳಿದರೆ ಕೊಡುತ್ತೀಯಾ ತಾಯಿ ಎಂದಾಗ ಮುದ್ದಮ್ಮ ಹೇಳುತ್ತಾಳೆ ಯಮನಿಗೆ ಕೊಟ್ಟರು ನಾನು ನಿನಗೆ ಕೊಡುವುದಿಲ್ಲ ಎಂದು ಹೇಳಿದಾಗ ಧರೆಗೆ ದೊಡ್ಡವರು ನೀನು ಕೊಡೋದಿಲ್ಲ ಅಂದರೆ ನಾನು ಬಿಡುವುದಿಲ್ಲ ಅನ್ನುತ್ತಾರೆ. ನಾನು ಯಮನಾಗಿ ಬಂದು ನಿನ್ನ ಮಗನನ್ನ ಕರೆದುಕೊಂಡು ಹೋಗುತ್ತೇನೆ ಎಂಬ ಮಾತನ್ನ ಕೇಳಿ ಮುದ್ದಮ್ಮ ಗಳಗಳನೆ ಅಳುತ್ತಾಳೆ. ಆಗ ಅಳು ಅಳುತ್ತಾ ಮುದ್ದಮ್ಮ ಗುರುವೇ ನಾನು ಒಬ್ಬ ಹೆಂಗಸು ನಾನು ಕೊಡುತ್ತೀನಿ ಅಂತ ಹೇಳುವುದಕ್ಕೆ ನನ್ನ ಕೈಯಲ್ಲಿ ಆಗುವುದಿಲ್ಲ. ನನ್ನ ಗಂಡನನ್ನ ಕೇಳಬೇಕು ಎನ್ನುತ್ತಾಳೆ ಮುದ್ದಮ್ಮ ಧರೆಗೆ ದೊಡ್ಡವರು ಹೇಳುತ್ತಾರೆ ಆಗಲಿ ತಾಯಿ ನೀನು ಹೋಗಿ ನಿನ್ನ ಗಂಡನನ್ನ ಕೇಳಿಬುಟ್ಟು ಕೊಡವ್ವ ತಾಯಿ ಅಂದರಂತೆ ಆಗ ಮುದ್ದಮ್ಮ ಹೇಳುತ್ತಾಳೆ ಸ್ವಾಮಿ ನನ್ನ ಪತಿ ದೇವರು ಅಟ್ಟಿ ಅರಮನೆಯಲಿಲ್ಲ ಮಾರೇಹಳ್ಳಿ ಪಟ್ಟಣದ

ಮುಂಭಾಗದ ಅರಳಿಕಟ್ಟೆ ಜಗಲಿ ಮುಂಭಾಗದಲ್ಲಿ ಏಳನೂರು ದೊಡ್ಡ ಕುಲುಮೆ ಹೂಡಿಕೊಂಡು ಏಳನೂರು ಜನ ಜೀತದಾಳು ಕಟ್ಟಕೊಂಡು ಬಾರಿ ಬಾರಿ ಕೆಲಸ ಮಾಡಿಸುತ್ತಿದ್ದಾರೆ ಬಸವಚಾರಿ ಅಂದರೆ ಮೂವತ್ತು ಹಳ್ಳಿಗೂ ಯಜಮಾನ್ರು ಇವತ್ತು ನ್ಯಾಯ ಮಾಡುತ್ತಿದ್ದಾರೆ. ಅವರ ಬಳಿ ಹೋಗಿ ಕೇಳುತ್ತೀನಿ ಗುರುವೆ ಅವರು ಮಗನನ್ನೆ ಕೊಟ್ಟು ಕಳುಹಿಸು ಎಂದರೆ ಕೊಡುತ್ತೇನೆ ಇಲ್ಲ ಅಂದರೆ ನಾನು ನನ್ನ ಮಗನ ಕೊಡುವುದಿಲ್ಲ ಅನ್ನುತ್ತಾಳೆ ಈ ರೀತಿ ಹೇಳಿ ಮುದ್ದಮ್ಮ ಗಂಡನ ಬಳಿಗೆ ಓಡಿ–ಓಡಿ ಬರುತ್ತಾಳೆ. ಓಡಿ–ಓಡಿ ಬಂದು ಪತಿದೇವರ ಪಾದದ ಮೇಲೆ ದಿಢೀರನೆ ಬಿದ್ದುಕೊಳ್ಳುತ್ತಾಳೆ ಆಗ ಅವಳನ್ನ ಬಸವಚಾರಿ ಮೇಲಕ್ಕೆ ಏಳಿಸಿ ಈ ಕುಲುಮೆ ಕಛೇರಿಗೆ ಏಕೆ ಬಂದೆ ಅಂತ ಮುದ್ದಮ್ಮನನ್ನು ಪ್ರಶ್ನೆ ಮಾಡುತ್ತಾನೆ.

ಮುದ್ದಮ್ಮ ಮನೆಯಲ್ಲಿ ಜಂಗಮನಿಗೆ ಜೊತೆ ನಡೆದಂತ ವಿಷಯವನ್ನ ಗಂಡನಿಗೆ ತಿಳಿಸಿ ಹೇಳುತ್ತಾಳೆ ಆಗ ಬಸವಚಾರಿಗೆ ಬಹಳ ಕೋಪ ಬಂದು ನನ್ನ ಮಗನ ಕೇಳಿದ ಮುಂಡೆ ಮಗನ ನಾನು ಸುಮ್ನೆ ಬಿಡುವುದಿಲ್ಲ ಅಂತ ಹೇಳಿ ಧರೆಗೆ ದೊಡ್ಡವರನ್ನ ಬಾಯಿಗೆ ಬಂದಂತೆ ಬೈಯ್ಯುತ್ತಿದ್ದಾನೆ ಈ ರೀತಿ ಬಸವಯ್ಯ ಆಡಿದಂತ ಮಾತು ಧರೆಗೆ ದೊಡ್ಡವರ ಪಾದಕೆ ಅರಿವಾಗುತ್ತದೆ. ಗೊತ್ತಾದ್ದ ತಕ್ಷಣ ಶಿವಾ ಶಿವಾ ಅಂತಹೇಳಿ ಬಸವಚಾರಿ ಮನೆಯನ್ನು ಬಿಟ್ಟು ದೇವರು ದಯಮಾಡುತ್ತಾರೆ. ಆದರೆ ಈ ಕಡೆ ಮುದ್ದಮ್ಮ ತನ್ನ ಗಂಡ ಬಸವಚಾರಿ ಆಡಿದ ಮಾತನ್ನ ಕೇಳಿಕೊಂಡು ಆ ಕಡೆಯಿಂದ ಬರುತ್ತಿದ್ದಾಳೆ ಈ ಕಡೆ ಬರುತ್ತಿದ್ದ ಗುರುವನ್ನ ನೋಡಿ ಪಾದಕ್ಕೆ ಬೀಳುತ್ತಾಳೆ ಆಗ ಅವಳನ್ನ ಮೇಲಕ್ಕೆದ್ದೇಳು ಎಂದೂ ಹೇಳಿ ಮುದ್ದಮ್ಮ ನಿನ್ನ ಗಂಡ ಬಸವಚಾರಿ ಏನಂತ ಹೇಳಿದ್ದಾರೆ ಹೇಳು ಮುದ್ದಮ್ಮ ಅಂತ ಕೇಳುತ್ತಾರೆ. ಗಂಡ ಹೇಳಿದ ಮಾತನ್ನು ಹೇಳದೆ ಮುದ್ದಮ್ಮ ಆರು ಜನ ಮಕ್ಕಳಲ್ಲಿ ಯಾರನ್ನಾದರೂ ಕೇಳಲಿ ಕೊಟ್ಟು ಬಿಡ್ತೀನಿ ಆದರೆ ಕಿರಿ ಕೆಂಪಚಾರಿಯನ್ನ ಕೊಡುವುದಿಲ್ಲ ಅಂತ ಹೇಳಿದ್ದಾರೆ ನನ್ನ ಪತಿ ದೇವರು ಅಂತ ಹೇಳುತ್ತಾಳೆ.

ಧರೆಗೆ ದೊಡ್ಡವರು ತಾಯಿ ನಿನ್ನ ಬಾಯಲ್ಲಿ ಸುಳ್ಳು ಮಾತು ಬೇಡ ನಿನ್ನ ಗಂಡ ಆಡಿದ ಮಾತು ನನಗೆ ಆಗಲೇ ಗೊತ್ತಾಗಿದೆ ತಾಯಿ ಅಂತಾರೆ. ಆಗ ನಿನ್ನ ಗಂಡ ಆಡಿದ ಮಾತು ಕೇಳಿ ನಾನು ಮನೆ ಬಿಟ್ಟು ಹೊರಟು ಹೋಗುತ್ತಿದ್ದೇನೆ ಎಂದು ಹೇಳಿ ಧರೆಗೆ ದೊಡ್ಡವರು ಅವರು ಊರ ಮುಂದಿನ ಅರಳಿಕಟ್ಟೆ ಜಗಲಿಗೆ ಸ್ವಾಮಿಯವರು ಬರುತ್ತಾರೆ.

ಧರೆಗೆ ದೊಡ್ಡವರು ಅರಳಿ ಕಟ್ಟೆಯ ಮೇಲೆ ಬಂದು ಕುಳಿತುಕೊಂಡು ಕೆನ್ನೆಯ ಮೇಲೆ ಕೈಹಿಟ್ಟುಕೊಂಡು ಮನಸ್ಸಿನಲ್ಲಿ ಚಿಂತೆ ಮಾಡಿಕೊಂಡು ಏನಂತ ಯೋಚನೆ ಮಾಡುತ್ತಾರೆ ಅಂದರೆ. ಈ ಕೀಳು ಮಟ್ಟದ ನರ ಮಾನವರು ಬಡತನ ಇರುವಾಗ ದೇವರಧ್ಯಾನ ಮಾಡುತ್ತಾರೆ ಸಿರಿತನ ಬಂದ ಮೇಲೆ ದೇವರನ್ನ ಮರೆತು ಬಿಡುತ್ತಾರೆ

ಅಂತ ಹೇಳಿ ಈಗ ನಾನು ಕೆಂಪಚಾರಿಯ ಭಕ್ತಿ, ದೃಢ ನೋಡಬೇಕೆಂದು ಹೇಳಿ ಧರಗೆ ದೊಡ್ಡವರು ಕೆಂಪಚಾರಿಯ ಕುಲುಮೆಯ ಹತ್ತಿರ ಓಡಿ-ಓಡಿ ಬರುತ್ತಾರೆ.

ಧರೆಗೆ ದೊಡ್ಡವರು ಕೆಂಪಚಾರಿಯ ಕುಲುಮೆಗೆ ಬರುವಾಗ ಏಳು ವರ್ಷದ ಮಗನಾದ ಕೆಂಪಚಾರಿಯನ್ನ ಕಣ್ಣಿಂದ ನೋಡಿ ಕೆಂಪಚಾರಿಯ ಮುಖವ ಮಟ-ಮಟನೆ ನೋಡುತ್ತಾರೆ. ಕೆಂಪಚಾರಿಯು ಕುಲುಮೆಯ ಒಳಗಡೆ ಬಂದು ಧರೆಗೆ ದೊಡ್ಡವರು ಎಡ, ಬಲ, ಸುತ್ತಮುತ್ತ, ತಿರುಗಿ ನೋಡಿದರು ಆಗ ನನ್ನ ಶಿಶು ಮಗ ನನ್ನ ಎದುರಿಗೆ ಕುಳಿತವನೇ ಅಂತೇಳಿ ಧರೆಗೆ ದೊಡ್ಡವರು ಕೆಂಪಚಾರಿಯ ಮುಖ ನೋಡಿ ಸಂತೋಷ ಪಡುತ್ತಾರೆ ಆಮೇಲೆ ಧರೆಗೆ ದೊಡ್ಡವರ ಮುಖವ ಕೆಂಪಣ್ಣ ನೋಡಿಬುಟ್ಟು ಏನು ಹೇಳುತ್ತಿದಾನೆ ಅಂದರೆ ಏನೋ ಜೀತಾದಾಳುಗಳೇ ಯಾವನೋ ಭಿಕ್ಷುಕ ನನ್ನ ಕುಲುಮೆಗೆ ಬಂದಿದ್ದಾನೆ ಭಿಕ್ಷೆ ಮಾಡುವ ಮುಂಡೆ ಮಕ್ಕಳ ಮುಖವ ನಾನು ನೋಡಬಾರದು, ನೋಡಿದರೆ ನನಗೆ ತುಂಬ ಕೋಪ ಬರುತ್ತದೆ. ಆದುದರಿಂದ ಯಾವನೋ ಸಿದ್ದ ಬಂದವನೇ ಅವನಿಗೆ ನಾವು ಸುದ್ದ ಮಾಡಿ ಕಳುಹಿಸಬೇಕು ಬುದ್ಧಿ ಕಲಿಸಿ ಕಳುಹಿಸಬೇಕು ಎಂದು ಮಾತು ಧರೆಗೆ ದೊಡ್ಡವರ ಪಾದಕೆ ಅರಿವಾಗುತ್ತದೆ. ಮಾತನ್ನ ಕೇಳಿ ಧರೆಗೆ ದೊಡ್ಡವರು ಶಿವಾ ಶಿವಾ ಅಂತೇಳಿ ಎರಡು ಕಣ್ಣುಗಳನ್ನು ಮುಚ್ಚಿಕೊಳ್ಳುತ್ತಾರೆ ಆಗ ಕಣ್ಣು ಮುಚ್ಚಿಕೊಂಡು ಯೋಚನೆ ಮಾಡುತ್ತಾ ಧರೆಗೆ ದೊಡ್ಡವರು ಲೋ ಮಗನೆ ನಾನು ಪಡೆದ ಕಂದಾ ನೀನು ನನ್ನನೇ ಭಿಕ್ಷುಕ ಅಂತ ಕರಿಯುತ್ತೀಯಾ ಅಂತ ಹೇಳಿ ನಾನು ಹೊತ್ತಿಕೊಂಡಿರುವಂತಹ ಜೋಳಿಗೆಯನ್ನ ನಿನ್ನ ಕೈಲಿ ಕೂರಿಸುತ್ತೇನೆ ನಾನು ಬಾರಿಸುವ ತಂಬೂರಿಯನ್ನ ನಿನ್ನ ಕೈಲಿ ಬಾರಿಸುತ್ತೇನೆ. ಮಗನೇ ನಿನ್ನ ಲಕ್ಷೀಕನ ಮಗನ ನಾನು ಭಿಕ್ಷುಕನ ಮಾಡುತ್ತೇನೆ ಎನ್ನುತ್ತಾರೆ. ನಾನು ಮಾಡದೆ ಹೋದರೆ ನನಗೆ ಮಂಟೇದ ಲಿಂಗಯ್ಯ ಅಂತ ನಾಮಕರಣ ನನಗ್ಯಾಕೋ ಅಂತ ಧರೆಗೆ ದೊಡ್ಡವರು ಕುಲುಮೆಯ ಒಳಗಡೆ ಬಂದು ದಾನ ಧರ್ಮ ಕೇಳುತ್ತಾರೆ ಆಗ ಅಲ್ಲಿದ್ದ ಯಾವು ಒಬ್ಬ ಆಳುಗಳು ಸಹ ಮಾತಾಡಲಿಲ್ಲ ಆಗ ಧರೆಗೆ ದೊಡ್ಡವರು ಭಿಕ್ಷೆಯನ್ನ ಸಾರಿಕೊಂಡು ಕೆಂಪಣ್ಣನ ಮುಂಭಾಗಕ್ಕೆ ಬಂದು ನಿಂತಿಕೊಂಡು ಏನಂತ ಹೇಳುತ್ತಾರೆ ಅಂದರೆ ಕಂದಾ ಯಾರಪ್ಪ ನೀನು ಈ ಕುಲುಮೆಯೊಳಗೆ ಕಂದಾ ಕೆಂಪಚಾರಿ ಅನ್ನುವನು ಈ ಗುಂಪಿನೊಳಗೆ ಯಾರು ಅಂತ ಕೇಳುತ್ತಾರೆ.

ಕೆಂಪಚಾರಿ ಹೇಳುತ್ತಾನೆ ಛೇ ಮುಂಡೆ ಮಗನೆ ಯಾವನೋ ಭಿಕ್ಷುಕ, ಪರದೇಶಿ ನನ್ನ ಕುಲುಮೆಗೆ ಬಂದು ಕೆಂಪಚಾರಿ ಅಂತ ಏಕವಚನದಲ್ಲಿ ಕರೆಯುತ್ತೀಯಾ ನಿನ್ನ ಸರಿ ಮಾಢುತ್ತೀನಿ ಅಂತಹೇಳಿ ಅವನನ್ನ ಹೊಡೆಯಲು ಹೋಗುತ್ತಾನೆ.

ಧರೆಗೆ ದೊಡ್ಡವರು ಏನಪ್ಪ ನಿನ್ನ ಏನಂತ ಕರಿಬೇಕಪ್ಪ ನಿನ್ನ ಕರಿವಂತ ರೀತಿ ಯಾವುದು ಹೇಳು ಬಿಡು ಎಂದು ಕೇಳುತ್ತಾರೆ. ಆಗ ಕೆಂಪಚಾರಿ ಹೇಳುತ್ತಾನೆ ನನ್ನ

ಕೆಂಪಚಾರಿ ಅಂತ ಕರಿದಿಯಲ್ಲಾ ನನ್ನ ಆಚಾರಿ ಅನ್ನುವವನಿಗೆ ಗ್ರಾಚಾರ ಬಿಡಿಸಬೇಕು ಪರದೇಶಿ ಅಂದರಂತೆ.

ಧರೆಗೆ ದೊಡ್ಡವರು ಅರ್ಥವಾಯಿತು ಮಗನೇ ನನಗೆ ಗೊತ್ತಾಯ್ತು ಕಂದಾ ಎನ್ನುತ್ತಾ ಹೇಳಿ ಬಹಳ ಚಿಂತೆ ಮಾಡುತ್ತಾರೆ. ಆಗ ಧರೆಗೆ ದೊಡ್ಡವರು ಕಂದಾ ಕೆಂಪಣ್ಣ ನಾನು ಯಾರು ಅಂತ ನಿನಗೆ ಗೊತ್ತಿಲ್ಲ, ನಾನು ಒಬ್ಬ ಗುರು ಕಾಣೋ ನೀನು ನನಗೆ ಶಿಷ್ಯ ಕಾಣೋ ಅನ್ನುತ್ತಾರೆ.

ಆ ರೀತಿ ಅಂದ ತಕ್ಷಣ ಕೆಂಪಣ್ಣ ಎರಡು ಕಿವಿಯಲ್ಲಿ ಕೇಳಿ ಬಿಟ್ಟ ಛೇ ಮುಂಡೆ ಮಗನೇ, ನೀನು ನನಗೆ ಗುರು ನಾನು ನಿನಗೆ ಶಿಷ್ಯನೇನೊ ಅಂತ ಹೇಳಿ ಲೋ ಜಂಗಮ ನೀನಲ್ಲ ಗುರು, ನಾನೇ ನಿನಗೆ ಗುರು ಗೊತ್ತೇನೊ ಅನ್ನುತ್ತಾನೆ. ಕೆಂಪಚಾರಿ ಧರೆಗೆ ದೊಡ್ಡವರಿಗೆ ಕೇಳೋ ಜಂಗಮಾ ನಾನು ಆಚಾರಿ ಜಾತಿಯವರು, ಬ್ರಹ್ಮ ಕುಲದವರು, ಒಕ್ಕಲ ಪಂಚಾಳದವರು ಅಂದ್ರೆ ಈ ಪ್ರಪಂಚಕ್ಕೆ ನಾವೇ ಗುರುಗಳು ನಮಗಿಂತ ಗುರುಗಳು ಈ ಪ್ರಪಂಚದಲ್ಲಿ ಯಾರಿದ್ದಾರೆ ಹೇಳು ಪರದೇಶಿ ಅಂತ ಹೇಳುತ್ತಾನೆ.

ಪರಂಜ್ಯೋತಿಯವರು ಕೆಂಪಣ್ಣ ಆಡಿದ ಮಾತನ್ನ ಕರ್ಣದಲ್ಲಿ ಕೇಳಿ ಕೆಂಪಣ್ಣ ನೀನು ನನಗೆ ಯಾವ ರೀತಿ ಗುರುವಾದೆ ಅದೇ ರೀತಿ ನಾನು ನಿನಗೆ ಯಾವ ರೀತಿ ಶಿಷ್ಯನಾದೆ ಹೇಳು ಕಂದಾ ಅನ್ನುತ್ತಾರೆ. ಆಗ ಕೆಂಪಣ್ಣ ಧರೆಗೆ ದೊಡ್ಡವರಿಗೆ ನೀನು ಹೊತ್ತಿರುವ ಖಂಡಾಯ ಯಾರು ಮಾಡಿದವರು ನೀನು ಬಾರಿಸುವ ತಂಬೂರಿ ಅದನ್ಯಾರು ಮಾಡಿದವರು, ನೀನು ಕಟ್ಟಿರುವ ಲಿಂಗ ಯಾರು ಮಾಡಿದವರು ಯಾರು ಇದನ್ನೆಲ್ಲಾ ಮಾಡಿದವರು ನಾವೇ ಅದುದರಿಂದ ನಾವೇ ಮೊದಲು ಗುರುವು ಆಮೇಲೆ ನೀನು ಎರಡನೇ ಗುರುವು ಅಂತ ಹೇಳುತ್ತಾನೆ.

ಧರೆಗೆ ದೊಡ್ಡವರು ಕಂದಾ ನೀನು ನನ್ನ ನರಮಾನವ ಅಂತೇಳಿ ತಿಳಿದುಕೊಂಡು ಈ ರೀತಿ ಮಾತಾಡುತ್ತೀಯಾ ನಾನೊಬ್ಬ ದೇವರು ಕಣೋ ನೀನೊಬ್ಬ ನರಮನುಷ್ಯ ಅನ್ನುತ್ತಾರೆ, ಆಗ ಆ ರೀತಿ ಹೇಳಿ ಧರೆಗೆ ದೊಡ್ಡವರು ಕೆಂಪಣ್ಣನ ಮುಂದೆ ಸುಮ್ಮನೆ ನಿಂತುಕೊಳ್ಳುತ್ತಾರೆ. ಆಗ ಕೆಂಪಣ್ಣ ಲೇ ಜಂಗಮ ನನ್ನ ಕುಲುಮೆಗೆ ಯಾಕೆ ಬಂದೆ ನೀನು ಊರಿನೊಳಗೆ ಹೋದರೆ ರಾಗಿ ಜೋಳ ಕೊಡುತ್ತಾರೆ. ಮತ್ತು ಊಟ ಕೊಡುತ್ತಾರೆ ಅದನ್ನ ತೆಗೆದುಕೊಂಡು ಹೋಗಿ ಊಟ ಮಾಡಿಕೊಂಡು ಅರಳಿ ಮರದ ಚಾವಡಿಯೊಳಗೆ ಮಲಗಿಕೋ ಆಮೇಲೆ ಬೆಳಿಗ್ಗೆ ಆದ ಮೇಲೆ ಎದ್ದು ಹೋಗುವಂತೆ. ಆದರೆ ನೀನು ಇಲ್ಲಿಗೆ ಬಂದಿದ್ದಿಯಲ್ಲಾ ಏಕೆ? ಅಂತ ಕೇಳುತ್ತಾನೆ. ಆಗ ನನಗೆ ನಿನ್ನ ಕುಲುಮೆ ಹೋಗೆ ಹೋಗುತ್ತಿದ್ದನ್ನು ನೋಡಿ ನನಗೆ ಭಂಗಿ ಸೇದಲು ಬೆಂಕಿಕೆಂಡ ಬೇಕಾಗಿತ್ತು ಅದಕ್ಕೋಸ್ಕರ ಕೆಂಡ ಕೇಳಲು ಬಂದೆ, ಕೆಂಡ ಕೊಡೋ ಕಂದ ಅನ್ನುತ್ತಾರೆ.

ನೀನು ನನಗೆ ಕೆಂಡ ಕೊಟ್ಟರೆ ಧರ್ಮ ಬರುತ್ತದೆ ನೀನು ನನಗೆ ಬೆಂಕಿ ಕೊಟ್ಟರೆ ಬಹಳ ಪುಣ್ಯ ಬರುತ್ತದೆ ಅಂತ ಹೇಳುತ್ತಾರೆ.

ಕೆಂಪಣ್ಣನಿಗೆ ಬಹಳ ಸಿಟ್ಟು ಬಂದು, ಲೋ ಜಂಗಮ ಕೆಂಡ ಕೊಡುವುದಕ್ಕೆ ಒಬ್ಬ ಆಳು ತೆಗೆದು ಮಡಗಿದ್ದಿಯಾ ಅಂತ ಕೇಳುತ್ತಾನೆ. ಧರೆಗೆ ದೊಡ್ಡವರು ನನಗೆ ತಾಯಿ-ತಂದೆ ಇಲ್ಲ ಅಣ್ಣ-ತಮ್ಮ ಮೊದಲೇ ಇಲ್ಲ ನನಗೆ ಮಡದಿ ಮಕ್ಕಳಿಲ್ಲ ಸಂಸಾರದ ಸುಖ ನನಗಿಲ್ಲ, ನಾನು ಕಾಡಿನಲ್ಲಿ ಹುಟ್ಟಿದವನು ಕಾಡಿನಲ್ಲಿಯೇ ಬೆಳೆದವನು. ಆದುದರಿಂದ ಹುಡುಕಾಟ ಆಡಬೇಡ ಕಂದಾ ಭಂಗಿ ಸೇವನೆ ಮಾಡಿಕೊಂಡು ಹೋಗಿಬಿಡುತ್ತೇನೆ ಕೆಂಡ ಕೊಟ್ಟು ಬಿಡಪ್ಪ ಎನ್ನುತ್ತಾರೆ.

ಕೆಂಪಣ್ಣನಿಗೆ ಬಹಳ ಕೋಪ ಬಂದು ನಾನು ಕೆಂಡ ಕೊಡುತ್ತೇನೆ ಆದರೆ ನಾನು ಕೆಂಡ ಕೊಡುವಾಗ ನಿನ್ನ ಎರಡು ಹಸ್ತ ಒಡ್ಡಿ ತೆಗೆದುಕೊಳ್ಳಬೇಕು ಅಂದನಂತೆ. ಆಗ ಧರೆಗೆ ದೊಡ್ಡವರು ಕೆಂಡಕ್ಕೆ ತನ್ನ ಎರಡು ಹಸ್ತವನ್ನ ಒಡ್ಡುತ್ತಾರೆ.

ಕೆಂಪಣ್ಣಚಾರಿ ಎತ್ತು ಬಾರದ ಬೆಂಕಿ ಕೆಂಡವನ್ನ ಇಕ್ಕಳದಲ್ಲಿ ಹಿಡಿದುಕೊಂಡು ದೊಡ್ಡವರ ಹಸ್ತಕ್ಕೆ ಬೆಂಕಿ ಕೆಂಡವನ್ನ ಇಡುವಂತೆ ಕಾಲದಲ್ಲಿ ಆಗ ಅಗ್ನಿ ದೇವತೆ ಗಳಗಳನೆ ಅಳುತ್ತಾಳೆ ಬಹಳ ದುಃಖ ಪಡುತ್ತಾಳೆ. ಆಗ ಅಗ್ನಿದೇವತೆ ಬಹಳ ದುಃಖ ಪಟ್ಟುಕೊಂಡು ಪರಶಿವನ ಮಡತಿ ಪಾರ್ವತಿ ದೇವಿ ತಲೆಯಲ್ಲಿರುವ ಕೆಂಡಾದಾವರೆ ಪುಷ್ಪವಾಗಿ ಧರೆಗೆ ದೊಡ್ಡವರ ಹಸ್ತದ ಮೇಲೆ ಬಂದು ಕುಳಿತುಕೊಳ್ಳುತ್ತಾಳೆ. ಆಗ ಕಿರಿ ಕೆಂಪಣ್ಣ ಬೆಂಕಿ ಕೆಂಡ ಕೊಟ್ಟುಬಿಟ್ಟು ಅಂತೇಳಿ ಅವರು ಕಿಲಕಿಲನೆ ನಗುತ್ತಾನೆ ಹೋಗಿ ಮಂಚದ ಮೇಲೆ ಕುಳಿತುಕೊಳ್ಳುತ್ತಾನೆ.

ಧರೆಗೆ ದೊಡ್ಡವರು ಬಹಳ ದುಃಖದಿಂದ ಕೋಪ ಮಾಡಿಕೊಂಡು ಕೆಂಪಚಾರಿಗೆ ಶಾಪ ಕೊಟ್ಟುಬುಟ್ಟು ಅವರು ಕೆಂಪಚಾರಿಯ ಮನೆಯನ್ನು ಬೇಗದಲ್ಲಿ ಬಿಡುತ್ತಾರೆ.

ಆಗ ಕುಲುಮೆಯನ್ನ ಬಿಟ್ಟು ಧರೆಗೆ ದೊಡ್ಡವರು ಕುಂದೂರು ಬೆಟ್ಟಕ್ಕೆ ದೇವರು ದಯ ಮಾಡಿಸುತ್ತಾರೆ. ಜಗದ್ಗುರು, ಕುಂದೂರು ಬೆಟ್ಟಕ್ಕೆ ಹೋಗಿ ಅವರು ಅಜ್ಜನ ದಿಕ್ಕಿನ ಮೂಲಕ ಕುಂದೂರು ಬೆಟ್ಟ ಹತ್ತುತ್ತಾರೆ ಆಗ ಕುಂದೂರು ಬೆಟ್ಟಹತ್ತಿ ಅವರು ಕೊಡೆಕಲ್ಲಿಗೆ ಬಂದು ಅದರ ಮೇಲೆ ಕುಳಿತುಕೊಂಡು ಮುತ್ತಿನ ಜೋಳಿಗೆಗೆ ಕೈಹಾಕಿ ಗುರುವು ಆರುಕಟ್ಟು ಭಂಗಿ, ಆರುಕಟ್ಟು ಹೊಗೆ ಸೊಪ್ಪು ತೆಗೆದುಕೊಂಡು ಅಂಗೈನ ಮೇಲೆ ಸುರಿದುಕೊಂಡು, ಅದರ ಜೊತೆಗೆ ನಾಗರಾವಿನ ವಿಷ, ಎಕ್ಕದ ಹಾಲಿನ ರಸ, ಕಳ್ಳಿ ಹಾಲಿನ ರಸ, ಭಂಗಿ ಸೊಪ್ಪಿನ ರಸ, ಈ ಐದು ರಸಗಳನ್ನ ಕೂಡಿಸಿ ಪಂಚೈದು ಲೋಭ ಮಾಡಿ ಗಾಂಜಾ ಮಾಡುತ್ತಾರೆ.

ಗಾಂಜಾ ಮಾಡಿಕೊಂಡು ಬಂಗಾರದ ಚಿಲುಮೆಗೆ ಜಡಿದು ಜಡಿದು ತುಂಬಿ ಅದರೊಳಕ್ಕೆ ಕೆಂಡ ಹಾಕಿ ಒಂದು ದಮ್ಮು ಸೇದುತ್ತಾರೆ. ಆಮೇಲೆ ಬಲಗಡೆ ವಾಲುತ್ತಾರೆ ಎಡಗಡೆ ಜೋಲುತ್ತಾರೆ ಈ ರೀತಿ ಭಂಗಿಯನ್ನು ಹೊಡೆಯುತ್ತಿರುವಾಗ ಅದು ಮೂರು ದಮ್ಮಿಗೆ ದೇವ ಬೂದಿಯಾಗಿ ಸುರಿದು ಹೋಗುತ್ತದೆ ಆಗ ಧರೆಗೆ ದೊಡ್ಡವರು ಕುಡಿದಂತ ಹೊಗೆಯನ್ನ ಗೊಟ ಗೊಟನೆ ಕುಡಿದು ಹೊಟ್ಟೆಗೆ ನುಂಗುವರೇ ಆಗ ಅವರು ಭಂಗಿ ಕುಡಿದ ಜ್ಞಾನದಲ್ಲಿ ಪ್ರಪಂಚವನ್ನೆ ಮರೆತು ಹೋದರಂತೆ.

ಇಪ್ಪತ್ತು ನಾಲ್ಕು ಖಂಡುಗ ಭಂಗಿ ಸೊಪ್ಪಿನ ಹೊಗೆಯನ್ನು ಹೊಟ್ಟೇಲಿ ತುಂಬಿಕೊಂಡು ಜಗದ್ಗುರು ಧರೆಗೆ ದೊಡ್ಡವರು ಕುಂದೂರು ಬೆಟ್ಟದ ಮೇಲೆ ಕುಳಿತುಕೊಂಡು ಕೆಂಪಚಾರಿಯ ಕುಲುಮೆ ಕಾರ್ಖಾನೆ ಒಂದು ಸಾರಿ ನೋಡಿಬುಟ್ಟು ಭಂಗಿ ಸೊಪ್ಪಿನ ಹೊಗೆಯನ್ನ ಕೆಂಪಚಾರಿಯ ಕುಲುಮೆಗೆ ಉಫ್ ಅಂತ ಉರುಬುತ್ತಾರೆ ಧರೆಗೆ ದೊಡ್ಡಯ್ಯ ಬಿಟ್ಟಂತ ಹೊಗೆ ಇಡೀ ಮಾರೇಹಳ್ಳಿ ಗ್ರಾಮವನ್ನೆಲ್ಲಾ ಕವಿದು ಹೋಯಿತಂತೆ. ಆಗ ಬಿಟ್ಟಂತ ಹೊಗೆ ಕುಲುಮೆ ಒಳಗೆ ಬುಗಬುಗನೆ ಸುತ್ತುತ್ತಿತ್ತು. ಆಗ ಕೆಂಪಣ್ಣ ಯಾವುದು ಈ ಹೊಗೆ ಅಂತ ನೋಡುತ್ತಿರುತ್ತಾನೆ.

ಈ ರೀತಿ ನೋಡುವಾಗ ಧರೆಗೆದೊಡ್ಡವರು ಕುಂದೂರು ಬೆಟ್ಟದ ಕೊಡೆಯ ಕಲ್ಲಿನ ಮೇಲೆ ಕುಳಿತುಕೊಂಡು ಅವರು ಎಲ್ಲಾ ದಿಕ್ಕಿನಲ್ಲಿರುವ ಮಾರಿರೆಲ್ಲರನ್ನು ಪ್ರೇಮದಲ್ಲಿ ಕೂಗುತ್ತಾರೆ. ಆಗ ಎಲ್ಲಾ ಮಾರಿರೆಲ್ಲರೂ ಓಡಿ ಓಡಿ ಬರುತ್ತಾರೆ. ಅಲ್ಲಿಗೆ ಆಚಾರರ ಮನೆ ದೇವತೆ ಕುಲುವೆ ಕಾಳಮ್ಮ ಕಾಳಿದೇವಿ ಪರಂಜ್ಯೋತಿಯವರ ಬಳಿಗೆ ಬಿದ್ದು ಕೆಡವಿ ಓಡಿ ಓಡಿ ಬಂದು ಮುಂಭಾಗದಲ್ಲಿ ನಿಂತುಕೊಳ್ಳುತ್ತಾರೆ. ಬಂದು ಧರೆಗೆ ದೊಡ್ಡವರ ಮುಖವನ್ನ ಮಟ–ಮಟನೆ ನೋಡುತ್ತಾಳೆ.

ಕಾಳಿ ದೇವತೆ ಗುರುದೇವ ಇವತ್ತು ಮಂಗಳವಾರವಲ್ಲ ತುಂಬಿದ ಸೋಮವಾರ ಅಲ್ಲ ಆದರೂ ನೀವೂ ಬಹಳ ಪ್ರೇಮದಿಂದ ಕೂಗಿದ್ರಿಯಲ್ಲ ಗುರುದೇವ ಯಾತಕ್ಕೆ ನನ್ನ ಕರೆದ್ರೀ ಹನ್ನೆರಡು ವರುಷದಿಂದ ಬುದ್ಧಿ ನನಗೆ ಆಕಾರ ಕೊಡಲಿಲ್ಲ. ಹನ್ನೆರಡು ವರುಷದಿಂದ ನನಗೆ ಕುರಿ ತಲೆಯಿಲ್ಲ, ಮರಿ ತಲೆಯಿಲ್ಲ ಕೋಣನ ಬಲಿ ಇಲ್ಲ ನನ್ನನ್ನ ಹನ್ನೆರಡು ವರುಷದಿಂದ ಕರೆಯದೆ ಈವತ್ತು ಕರೆದಿದ್ದೀರಿ ಬುದ್ಧಿ ಎಲ್ಲಿಗೆ ಹೋಗಬೇಕು ಅಂತ ಕೇಳುತ್ತಾಳೆ. ಯಾರು ಮನೆಗೆ ಹೋಗಬೇಕು ಅನ್ನುತ್ತಾಳೆ.

ಗುರುದೇವ ನಾನು ತೋರಿದ ಹಟ್ಟಿಗೆ ಹೋದಿಯವ್ವ ಅಂದಾಗ ಮಾರಿ ಹೋಗುತ್ತೇನೆ ಹೇಳಿ ಗುರುದೇವ ಅನ್ನುತ್ತಾಳೆ. ಗುರುದೇವ ಮಾರಮ್ಮ ಕಟ್ಟಿದ ಮನೆ ನಿನ್ನದು , ಬಿತ್ತಿದ ಬೆಳೆ ನಿನ್ನದು ಹುಟ್ಟಿರೋ ಮಕ್ಕಳು ನಿನ್ನ ಮಕ್ಕಳು, ನಿನ್ನ ಮನೆಗೆ ನೀನೆ ಹೋಗಿ ಬೆಂಕಿ ಇದ್ದು ಬೇಯಿಸಬೇಕು, ನಿನ್ನ ಮಕ್ಕಳ ನೀನೆ ತಿನ್ನಬೇಕು, ನೀನೆ ಕಟ್ಟಿರುವಂತ ಮನೆ ನೀನೆ ಮುರಿದು ಹಾಕಬೇಕು ಅಲ್ಲಿಗೆ ನೀನು ಹೋಗುತ್ತಿಯಾ ಮಾರಮ್ಮ ಅಂದಾಗ ಯಾರ ಮನೆಗೆ ಹೋಗಬೇಕು ಗುರುದೇವ ಎನ್ನುತ್ತಾಳೆ ಮಾರಮ್ಮ.

ಮಾರೇಹಳ್ಳಿ ಮನಸ್ತಾನಕ್ಕೆ ಮನೆ ದೇವತೆಯಾಗಿ ಆಗ ಆ ಊರಿನಾಗೆ ಮನೆದೇವತೆ ತಂದೆ ಅನ್ನುತ್ತಾಳೆ ಆಗ ಆ ಊರಲ್ಲಿ ಯಾರ ಮನೆಗೆ ಹೋಗ ಬೇಕಪ್ಪಾ ಅಂತ ಕೇಳಿದಾಗ. ಧರೆಗೆ ದೊಡ್ಡವರು ಅವ್ವಾ ಬಸವಚಾರಿ ಮನೆಗೆ ನೀನು ಹೋಗಬೇಕು ಎನ್ನುತ್ತಾರೆ. ಆಗ ಮಾರಮ್ಮನಿಗೆ ಬಹಳ ದುಃಖವಾಗಿ ತಂದೆ ನೀವು ಎಲ್ಲಿಗಾದರೂ ಹೋಗಿ ಅಂತ ಹೇಳಿ ಅಲ್ಲಿಗೆ ಹೋಗುತ್ತೇನೆ ಆದರೆ ನಾನು ಮಾತ್ರ ಅಲ್ಲಿಗೆ ಹೋಗುವುದಿಲ್ಲ ಅನ್ನುತ್ತಾಳೆ. ಆಗ ಧರೆಗೆ ದೊಡ್ಡವರಿಗೆ ತುಂಬಾ ಕೋಪ ಬಂದು ಅವರ ಎಡಗೈನಲ್ಲಿ ಮುಂದಲೆ ಹಿಡಿದುಕೊಳ್ಳುತ್ತಾರೆ. ಅವಳ ಮುಂದೆಲೆ ಹಿಡಿದುಕೊಂಡು ಮುತ್ತಿನ ಜೋಳಿಗೆಗೆ ಕೈಹಾಕಿ ಒಂದು ಚಾವಟಿಯನ್ನ ತೆಗೆದುಕೊಂಡು ಮಾರಮ್ಮನ ಕುಂಡಿಯ ಮೇಲೆ ಮೂರು ಏಟು ಹೊಡೆಯುತ್ತಾರೆ.

ಮಾರಮ್ಮ ಹೊಡೆಯಬೇಡಿ ನನ್ನ ತಂದೆ ನೀನು ಹೇಳಿದ ಮನೆಗೆ ನಾನು ಹೋಗುತ್ತೇನೆ ಅಂತೇಳಿ ನಿನಗೆ ಬೇಡವಾದ ಒಕ್ಕಲು ನನಗ್ಯಾಕೆ ತಂದೆ ಅಂತ ಹೇಳಿ ಅಪ್ಪಣೆ ಕೊಟ್ಟುಬಿಡಿ ನನ್ನಪ್ಪ ಅಂತ ಹೇಳಿದಾಗ ಧರೆಗೆ ದೊಡ್ಡವರು ಎಲ್ಲ ಮಾರಿ ಕುರುಬಗೌಡ ಕುರಿಗಳನ್ನ ಹೊಡೆದುಕೊಂಡು ಬರುತ್ತಿರಲ್ಲ ಅದೇ ರೀತಿ ಹೊಡೆದುಕೊಂಡು ಮಾರೇಹಳ್ಳಿಗೆ ಬರುತ್ತಾರೆ. ಅವರೆಲ್ಲರನ್ನ ಮಾರೇಹಳ್ಳಿ ಹೊಂಗೆ ತೋಪಿನಲ್ಲಿ ಬಿಟ್ಟುಬಿಟ್ಟು ಅವರು ಬಸವಚಾರಿ ಮನೆಗೆ ನನ್ನ ದೇವರು ದಯ ಮಾಡಿಸುತ್ತಾರೆ. ಆಗ ಬಂದು ಅಲ್ಲಿರುವ ಏಳು ಜನ ಲಕ್ಷ್ಮಿಯರನ್ನ ಅತೀ ಪ್ರೇಮದಲಿ ಕರಿತಾರೆ. ಅತಿ ಪ್ರೇಮದಲ್ಲಿ ಕೂಗಿದ ತಕ್ಷಣ ಏಳು ಜನ ಲಕ್ಷ್ಮಿಯರು ಓಡಿ-ಓಡಿ ಬಂದು ಮಂಟೇದಲಿಂಗಪ್ಪನ ಮುಂಭಾಗದಲ್ಲಿ ಬಂದು ನಿಂತುಕೊಳ್ಳುತ್ತಾರೆ ಬಂದು ಶರಣು ಮಾಡುತ್ತಾರೆ. ಏಳು ಜನ ಲಕ್ಷ್ಮಿಯರು ಏಕಪ್ಪ ನಮ್ಮನ್ನ ಕರೆದ್ರಿಯಪ್ಪ ಅಂತ ಕೇಳಿದಾಗ ಧರೆಗೆ ದೊಡ್ಡವರು ನಿಮ್ಮ ಏಳು ಜನ ಲಕ್ಷ್ಮಿಯರಿಗೆ ಕಾವಲು ಕೊಡುತ್ತೇನೆ ಮಕ್ಕಳೇ ನೀವು ಈ ಸರ್ಪವನ್ನ ಕರೆದುಕೊಂಡು ನಾಡ ಮೇಲೆ ಹೊರಟು ಹೋಗಿ ಅಂತ ಹೇಳಿ ಅವರೆಲ್ಲರನ್ನ ನಾಡಿಗೆ ಕಳುಹಿಸಿ ಕೊಡುತ್ತಾರೆ.

ಈ ಕಡೆ ಧರೆಗೆ ದೊಡ್ಡವರು ದರಿದ್ರ ಲಕ್ಷ್ಮಿಯರನ್ನ ಕರೆದು ಮನೆ ಒಳಗಡೆ ಕೂಡಿದರಂತೆ. ಕೂಡಿದಾಗ ಅವರು ಕಾರಗಟ್ಟಿಯನ್ನ ತೆಗೆದು ಅಂಗೈ ಮೇಲೆ ಮಡಿಕೊಂಡು ಓಂ ನಮಃ ಶಿವಾಯ ಅಂತೇಳಿ ಆರು ಶಾಸ್ತ್ರ ಹದಿನೆಂಟು ಪುರಾಣ ಓದಿ ಬಿಟ್ಟು ಅವರು ಕಾದಗಟ್ಟಿ ತೆಗೆದುಕೊಂಡು ನಡು ಮನೆಯ ಒಳಗೆ ಒಡೆದರಂತೆ. ಕಾದಗಟ್ಟಿಯನ್ನ ಹೊಡೆದು ಅವರು ಕುಂದೂರು ಬೆಟ್ಟಕ್ಕೆ ಓಡಿ-ಓಡಿ ಬರುತ್ತಾರೆ.

ಧರೆಗೆ ದೊಡ್ಡವರು ಬಂದ ಮೇಲೆ ಮಾರೇಹಳ್ಳಿಯಲ್ಲಿದ್ದ ಮಾರಿಯರು ಬಸವಚಾರಿ ಮತ್ತು ಮುದ್ದಮ್ಮನ ಮನೆಗೆ ನುಗ್ಗಿ ಸಾಲು ಹೆಣವ ಕೆಡವುತ್ತಾರೆ. ಅವರ ಮನೆಯಲ್ಲಿದ್ದ ಸಾಲಟ್ಟಿ ದನಕರುಗಳಿಗೆ ರೋಗ ಕೊಟ್ಟವರೆ, ಸಾಲಟ್ಟಿಕರುಗಳಿಗೆ ಉಣ್ಣು

ಮಾರೇಹಳ್ಳಿ ಮನಸ್ಥಾನಕ್ಕೆ ಮನೆ ದೇವತಿಯಾಗಿ ಆಗ ಆ ಊರಿನಾಗೆ ಮನೆದೇವತೆ ತಂದೆ ಅನ್ನುತ್ತಾಳೆ ಆಗ ಆ ಊರಲ್ಲಿ ಯಾರ ಮನೆಗೆ ಹೋಗ ಬೇಕಪ್ಪಾ ಅಂತ ಕೇಳಿದಾಗ. ಧರೆಗೆ ದೊಡ್ಡವರು ಅವ್ವಾ ಬಸವಚಾರಿ ಮನೆಗೆ ನೀನು ಹೋಗಬೇಕು ಎನ್ನುತ್ತಾರೆ. ಆಗ ಮಾರಮ್ಮನಿಗೆ ಬಹಳ ದುಃಖವಾಗಿ ತಂದೆ ನೀವು ಎಲ್ಲಿಗಾದರೂ ಹೋಗಿ ಅಂತ ಹೇಳಿ ಅಲ್ಲಿಗೆ ಹೋಗುತ್ತೇನೆ ಆದರೆ ನಾನು ಮಾತ್ರ ಅಲ್ಲಿಗೆ ಹೋಗುವುದಿಲ್ಲ ಅನ್ನುತ್ತಾಳೆ. ಆಗ ಧರೆಗೆ ದೊಡ್ಡವರಿಗೆ ತುಂಬಾ ಕೋಪ ಬಂದು ಅವರ ಎಡಗೈನಲ್ಲಿ ಮುಂದಲೆ ಹಿಡಿದುಕೊಳ್ಳುತ್ತಾರೆ. ಅವಳ ಮುಂದೆಲೆ ಹಿಡಿದುಕೊಂಡು ಮುತ್ತಿನ ಜೋಳಿಗೆಗೆ ಕೈಹಾಕಿ ಒಂದು ಚಾವಟಿಯನ್ನ ತೆಗೆದುಕೊಂಡು ಮಾರಮ್ಮನ ಕುಂಡಿಯ ಮೇಲೆ ಮೂರು ಏಟು ಹೊಡೆಯುತ್ತಾರೆ.

ಮಾರಮ್ಮ ಹೊಡೆಯಬೇಡಿ ನನ್ನ ತಂದೆ ನೀನು ಹೇಳಿದ ಮನೆಗೆ ನಾನು ಹೋಗುತ್ತೇನೆ ಅಂತೇಳಿ ನಿನಗೆ ಬೇಡವಾದ ಒಕ್ಕಲು ನನಗ್ಯಾಕೆ ತಂದೆ ಅಂತ ಹೇಳಿ ಅಪ್ಪಣೆ ಕೊಟ್ಟುಬಿಡಿ ನನ್ನಪ್ಪ ಅಂತ ಹೇಳಿದಾಗ ಧರೆಗೆ ದೊಡ್ಡವರು ಎಲ್ಲ ಮಾರಿ ಕುರುಬಗೌಡ ಕುರಿಗಳನ್ನ ಹೊಡೆದುಕೊಂಡು ಬರುತ್ತಿರಲ್ಲ ಅದೇ ರೀತಿ ಹೊಡೆದುಕೊಂಡು ಮಾರೇಹಳ್ಳಿಗೆ ಬರುತ್ತಾರೆ. ಅವರೆಲ್ಲರನ್ನ ಮಾರೇಹಳ್ಳಿ ಹೊಂಗೆ ತೋಪಿನಲ್ಲಿ ಬಿಟ್ಟುಬಿಟ್ಟು ಅವರು ಬಸವಚಾರಿ ಮನೆಗೆ ನನ್ನ ದೇವರು ದಯ ಮಾಡಿಸುತ್ತಾರೆ. ಆಗ ಬಂದು ಅಲ್ಲಿರುವ ಏಳು ಜನ ಲಕ್ಷ್ಮಿಯರನ್ನ ಅತೀ ಪ್ರೇಮದಲಿ ಕರಿತಾರೆ. ಅತಿ ಪ್ರೇಮದಲ್ಲಿ ಕೂಗಿದ ತಕ್ಷಣ ಏಳು ಜನ ಲಕ್ಷ್ಮಿಯರು ಓಡಿ–ಓಡಿ ಬಂದು ಮಂಟೇದಲಿಂಗಪ್ಪನ ಮುಂಭಾಗದಲ್ಲಿ ಬಂದು ನಿಂತುಕೊಳ್ಳುತ್ತಾರೆ ಬಂದು ಶರಣು ಮಾಡುತ್ತಾರೆ. ಏಳು ಜನ ಲಕ್ಷ್ಮಿಯರು ಏಕಪ್ಪ ನಮ್ಮನ್ನ ಕರೆದ್ರಿಯಪ್ಪ ಅಂತ ಕೇಳಿದಾಗ ಧರೆಗೆ ದೊಡ್ಡವರು ನಿಮ್ಮ ಏಳು ಜನ ಲಕ್ಷ್ಮಿಯರಿಗೆ ಕಾವಲು ಕೊಡುತ್ತೇನೆ ಮಕ್ಕಳೇ ನೀವು ಈ ಸರ್ಪವನ್ನ ಕರೆದುಕೊಂಡು ನಾಡ ಮೇಲೆ ಹೊರಟು ಹೋಗಿ ಅಂತ ಹೇಳಿ ಅವರೆಲ್ಲರನ್ನ ನಾಡಿಗೆ ಕಳುಹಿಸಿ ಕೊಡುತ್ತಾರೆ.

ಈ ಕಡೆ ಧರೆಗೆ ದೊಡ್ಡವರು ದರಿದ್ರ ಲಕ್ಷ್ಮಿಯರನ್ನ ಕರೆದು ಮನೆ ಒಳಗಡೆ ಕೂಡಿದರಂತೆ. ಕೂಡಿದಾಗ ಅವರು ಕಾರಗಟ್ಟಿಯನ್ನ ತೆಗೆದು ಅಂಗೈ ಮೇಲೆ ಮಡಿಕೊಂಡು ಓಂ ನಮಃ ಶಿವಾಯ ಅಂತೇಳಿ ಆರು ಶಾಸ್ತ್ರ ಹದಿನೆಂಟು ಪುರಾಣ ಓದಿ ಬಿಟ್ಟು ಅವರು ಕಾದಗಟ್ಟಿ ತೆಗೆದುಕೊಂಡು ನಡು ಮನೆಯ ಒಳಗೆ ಒಡೆದರಂತೆ. ಕಾದಗಟ್ಟಿಯನ್ನ ಹೊಡೆದು ಅವರು ಕುಂದೂರು ಬೆಟ್ಟಕ್ಕೆ ಓಡಿ–ಓಡಿ ಬರುತ್ತಾರೆ.

ಧರೆಗೆ ದೊಡ್ಡವರು ಬಂದ ಮೇಲೆ ಮಾರೇಹಳ್ಳಿಯಲ್ಲಿದ್ದ ಮಾರಿಯರು ಬಸವಚಾರಿ ಮತ್ತು ಮುದ್ದಮ್ಮನ ಮನೆಗೆ ನುಗ್ಗಿ ಸಾಲು ಹೆಣವ ಕೆಡವುತ್ತಾರೆ. ಅವರ ಮನೆಯಲ್ಲಿದ್ದ ಸಾಲಟ್ಟಿ ದನಕರುಗಳಿಗೆ ರೋಗ ಕೊಟ್ಟವರೆ, ಸಾಲಟ್ಟಿಕರುಗಳಿಗೆ ಉಣ್ಣಿ

ರೋಗ ಕೊಟ್ಟವರ, ಸಾಲಟ್ಟ ಆಡುಗಳಿಗೆ ಕಸರೆ ರೋಗ ಕೊಟ್ಟವರೆ. ಆಮೇಲೆ ಅವರ ಮನೆಯಲ್ಲಿದ್ದ ಮುತ್ತು ರತ್ನವನ್ನೆಲ್ಲಾ ಮಣ್ಣು ಪಾಲು ಮಾಡವರ ಗುರುದೇವ.

ಮಾರಿಯರು ಮಣ್ಣು ಪಾಲು ಮಾಡುತ್ತಿದ್ದ ಮಾರಿಯರನ್ನ ಧರೆಗೆ ದೊಡ್ಡವರು ಕುಂದೂರು ಬೆಟ್ಟದ ಮೇಲೆ ಕುಳಿತುಕೊಂಡು ನೋಡುತ್ತಾ ಕುಳಿತ್ತಿದ್ದಾರೆ.

ಮಾರಿಯರು ಏಳು ಜನ ಮಕ್ಕಳಲ್ಲಿ ಆರು ಜನ ಮಕ್ಕಳಿಗೆ ಹುಚ್ಚು ಕೊಟ್ಟವರೆ ಬೆಪ್ಪು ಕೊಟ್ಟವರೆ, ಅವರು ಹುಚ್ಚು ಬೆಪ್ಪಿನ ಜ್ಞಾನದಲ್ಲಿ ಊರು ಗದ್ದಲವ ಮಾಡುತ್ತಾರೆ. ಈ ರೀತಿ ಮಾಡಿ ಬಸವಯ್ಯನ ಆರು ಜನ ಸೊಸೆಯಂದಿರಿಗೆ ಗುರುವು ಗಂಡು ಗಾಳಿನ ಕೂಡಿ ಹಲ್ಲು-ಹಲ್ಲು ಕಡಿದು ಮಣ್ಣು-ಮಣ್ಣು ಮುಕ್ಕಿ ಅಟ್ಟಿ ಹಜಾರದಲ್ಲಿ ಪಕ ಪಕನೆ ಪ್ರಾಣ ಬಿಡುತ್ತಾರೆ. ಆದರೆ ಮಂಟೇದ ಲಿಂಗಯ್ಯನವರು ಕೆಂಪಚಾರಿಗೆ ಮಾತ್ರ ಯಾವುದೆ ಹಾನಿಯನ್ನುಂಟು ಮಾಡದೆ ಅವನನ್ನ ಬಿಡುತ್ತಾರೆ. ಆಗ ಕೆಂಪಚಾರಿ ಕುಲುಮೆ ಕಾರ್ಖಾನೆಯಲ್ಲಿದ್ದ ಆಳುಗಳಿಗೆ ಹೇಳಿ ಈಗ ಬೆಳಿಗ್ಗೆ ಎಂಟು ಗಂಟೆಯಾಗಿದೆ ನನ್ನ ತಾಯಿ ಮುದ್ದಮ್ಮ ನನಗೆ ಹಾಲು ಕರೆದು ಮಡಗಿದ್ದಾರೆ ನಾನು ಹಾಲನ್ನ ಕುಡಿದುಕೊಂಡು ಊಟ ಮಾಡಿಕೊಂಡು ಬರುವತನಕ ನೀವು ಕೆಲಸ ಮಾಡಿ ಅಂತಹೇಳಿ ಕೆಂಪಣ್ಣ ಕುಲುಮೆಯನ್ನ ಬಿಟ್ಟು ಮನೆಗೆ ಬರುತ್ತಾನೆ.

ಕುಲುಮೆಯನ್ನ ಬಿಟ್ಟು ಕೆಂಪಣ್ಣ ಮನೆಗೆ ಬಂದು ಬಂದು ಪಾದವ ತೆಗೆದು ಒಳಗಡೆ ಮಡಗುತ್ತಾನೆ. ನೋಡಿದ ತಕ್ಷಣ ಒಳಗಡೆ ಕೋಳಿ ಕೊತ್ತಿಗಳು ಸತ್ತು ಬಿದ್ದಿದ್ದವು ಬಲಗಡೆ ತಿರುಗಿ ನೋಡುತ್ತಾನೆ ಎತ್ತು-ಎಮ್ಮೆಗಳು ಸತ್ತು ಬಿದ್ದಿದ್ದಾವೆ. ಮನೆ ಒಳಗಡೆ ಹೋಗಿ ನೋಡಿದಾಗ ಅಲ್ಲಿ ಆರು ಜನ ಅತ್ತಿಗೆಯರು ಸತ್ತು ಪ್ರಾಣ ಬಿಟ್ಟವರೆ. ಅದನ್ನು ನೋಡಿ ಓಡಿ-ಓಡಿ ಬಂದು ಅತ್ತಿಗೆಯರ ಮುಂದೆ ನಿಂತುಕೊಂಡು ಕೆಂಪಚಾರಿ ದುಃಖ ಪಡುತ್ತ ಅತ್ತಿಗೆಯರ ಪಾದದ ಮೇಲೆ ದಿಢೀರನೆ ಬಿದ್ದನಂತೆ.

ಅಣ್ಣಂದಿರ ನೆನೆದುಕೊಂಡು ನನ್ನ ಅಣ್ಣಂದಿರಿಗೆ ಏನಾಗಿದೆಯೋ ಅಂತ ಹೇಳಿ ಮನೆಯನ್ನೆಲ್ಲಾ ಹುಡುಕಾಡಿಕೊಂಡು ಬಂದ ಕೆಂಪಣ್ಣ ನೋಡುತ್ತಾನೆ ಎಲ್ಲಾ ಚಿನ್ನ-ಬೆಳ್ಳಿ ಕಂಬದ ಸಾಲುಗಳು ಮರದ ಕಂಬವಾಗಿತ್ತು ಆಗ ತಂದೆ-ತಾಯಿರನ್ನು ನೆನೆದುಕೊಂಡು ನನ್ನ ತಂದೆ-ತಾಯಿಯರನ್ನ ನೋಡಬೇಕೆಂದು ತಂದೆ-ತಾಯಿ ಮಲಗುವಂತಹ ಪಟ್ಟೆ ಮಂಚದ ಬಳಿಗೆ ಬಂದು ನೋಡುತ್ತಾನೆ ಬಸವಚಾರಿ ಮತ್ತು ಮುದ್ದಮ್ಮನಿಗೆ ಕಾಲು ಸೇದೋಗಿತ್ತು ಕೈಗಳು ಸೇದೋಗಿತ್ತು ನಾಲಿಗೆಯಲ್ಲಿ ಮಾತಾಡಲು ಆಗುತ್ತಿರಲಿಲ್ಲ. ಗಂಡ-ಹೆಂಡ್ತೀರ ಕಣ್ಣುಗಳು ಇಂಗಿ ಹೋಗಿದ್ವಂತೆ. ಈ ದೃಶ್ಯವನ್ನ ನೋಡಿದ ಕೆಂಪಣ್ಣ ತಂದೆ-ತಾಯಿಯರ ಪಾದದ ಮೇಲೆ ಬಿದ್ದ ಬಹಳ ದುಃಖಿತನಾಗಿ ಗಳಗಳನೆ ಅಳುತ್ತಿದ್ದಾನೆ. ಆಗ ಕೆಂಪಣ್ಣ ನನ್ನ ತಂದೆ-ತಾಯಿ ಸತ್ತಿಲ್ಲ ನನ್ನ ತಂದೆ-ತಾಯಿ ಜೀವಂತವಾಗಿದ್ದಾರೆ. ಅವರಿಗೆ ಒಂದು ಪಾವು ಹಾಲನ್ನ ತಂದು ತಂದೆ-ತಾಯಿ

ಬಾಯಿಗೆ ಬಿಟ್ಟು ಬಿಟ್ಟರೆ ನನ್ನ ತಂದೆ ತಾಯಿ ಬದುಕುತ್ತಾರೆ ಅಂತೇಳಿ ಓಡಿ ಹೋಗಿ ಹಾಲನ್ನ ನೋಡುತ್ತಾನೆ ಆದರೆ ಹಾಲಿನ ಗಡಿಗೆಯೊಳಗೆ ಹಾವು-ಚೇಳುಗಳು ಆಟ-ಆಡುತ್ತಿದ್ದಾವೆ. ಆಗ ಕೆಂಪಣ್ಣ ಓಡಿ ಬಂದು ಹಸುವಿನ ಎದೆಯಲ್ಲಿ ಕರೆಯಬೇಕು ಅಂತ ಹೇಳಿ ಹಾಲು ಕರೆಯುತ್ತಾನೆ ಆದರೆ ಹಸುವಿನ ಎದೆಯಲ್ಲಿ ಹಾಲಿನ ಬದಲು ರಕ್ತ ಬರುತ್ತದೆ. ಆಗ ಹಸುವಿನ ಎದೆ ಹಿಡಿದುಕೊಂಡು ಗಳಗಳನೆ ಅಳುತ್ತಾನೆ.

ಈ ಕಡೆ ಮುದ್ದಮ್ಮ ಧರೆಗೆ ದೊಡ್ಡವರನ್ನ ಬಹಳ ನೆನಯುತ್ತಾ ಇರುವುದನ್ನ ಧರೆಗೆ ದೊಡ್ಡವರು ಕಣ್ಣಿಂದ ನೋಡಿಕೊಂಡರಂತೆ ಆಗ ಧರೆಗೆ ದೊಡ್ಡವರು ಈಗಲಾದರೂ ಬಸವಚಾರಿ ಮತ್ತು ಮುದ್ದಮ್ಮನ ದೇವರ ಜ್ಞಾನ ಬಂತು ಅಂತಹೇಳಿ ಕಪ್ಪು ದೂಳ್ತ ತೆಗೆದು ಉಫ್ ಅಂತ ಉರಿಬಿದರಂತೆ ಆಗ ಅವರಿಗೆ ಕೈಕಾಲುಗಳು ಬರುತ್ತವೆ ಮತ್ತು ಕಣ್ಣುಗಳು ಸಹ ಬರುತ್ತದೆ. ಹಾಗೆಯೇ ನಾಲಿಗೆಯು ಕೂಡ ಸರಿಯಾಗುತ್ತದೆ.

ಮುದ್ದಮ್ಮ ಧರೆಗೆ ದೊಡ್ಡವರ ಮುಖವ ಕಣ್ಣುಬಿಟ್ಟು ನೋಡುತ್ತಾಳೆ. ಆಗ ಧರೆಗೆ ದೊಡ್ಡವರಿಗೆ ಕೈ ಎತ್ತಿ ಮುಗಿಯುತ್ತಾಳೆ. ಧರೆಗೆ ದೊಡ್ಡವರು ಮುದ್ದಮ್ಮ ನಿನ್ನ ಮಗನಾದ ಕೆಂಪಚಾರಿಯನ್ನ ತಂದು ನನ್ನ ಜೋಳಿಗೆಗೆ ದಾನ ನೀಡು ಮಗಳೇ ನನ್ನ ಖಂಡಾಯ ಬೆಳಗುವುದಕ್ಕೆ ಗಂಡು ಮಗನ ಕೊಡು ಮಗಳೇ ಅಂತ ಕೇಳುತ್ತಾರೆ. ಆಗ ಕೊಡದಿದ್ದ ಪಕ್ಷದಲ್ಲಿ ಧರೆಗೆ ದೊಡ್ಡವರು ಕೆಂಪಣ್ಣನ ಮೈಗೆ ಕಪ್ಪು ದೂಳ್ತವನ್ನ ಹಾಕುತ್ತಾರೆ. ಹಾಕಿದ ತಕ್ಷಣ ಬೆಪ್ಪು-ಹುಚ್ಚು ಬಂದು ಊರಿನೆಲ್ಲಾ ತಿರುಗಿ, ಬಟ್ಟೆಯನ್ನ ಹರಿದುಕೊಂಡು ಹುಟ್ಟಿದ ನಿರ್ವಾಣದಲ್ಲಿ ಊರು ಊರು ತಿರುಗಿ ಹಾದಿ ಮಣ್ಣನ್ನು ನೋಡಿ ಅದನ್ನ ಬಕ್ಕ ಬಕ್ಕನೆ ಮುಕ್ಕುತ್ತಾನೆ. ಅವನು ಕಲ್ಲನ್ನು ಕಡಿಯುತ್ತಾ ಬೆಪ್ಪಿನ ಜ್ಞಾನದಲ್ಲಿ ತನ್ನ ಕುಲುಮೆಗೆ ಬರುತ್ತಾನೆ ಇಲ್ಲಿಗೆ ಬಂದು ಅವನು ಕೆಂಡವನ್ನೆಲ್ಲಾ ನೋಡುತ್ತಾನೆ ಅದನ್ನು ಗೋರಿ ಮೈಗೆ ಸುರಿದುಕೊಳ್ಳುತ್ತಾನೆ. ಮತ್ತು ಕೆಂಡವನ್ನ ತೆಗೆದುಕೊಂಡು ಕೆಂಡವನ್ನೆಲ್ಲಾ ತಿನ್ನುತ್ತಾನೆ.

ಈ ರೀತಿಯಾಗಿ ಕೆಂಡವನ್ನ ತಿಂದುಕೊಂಡು ತಂದೆ-ತಾಯಿ ಮರೆತು, ಅಣ್ಣ ತಮ್ಮಂದಿರ ತೊರೆದು ತನ್ನ ಸಿರಿಸಂಪತ್ತನ್ನ ಬೆಳ್ಳಿ ಬಂಗಾರ ತೊರೆದು ಆರು ಜನ ಅತ್ತಿಗೆಯರನ್ನ ಮರೆತು ಅವನ ಬೆಪ್ಪಿನ ಗ್ಯಾನದಲ್ಲಿ ಕುಂದೂರು ಬೆಟ್ಟ ಹತ್ತುತ್ತಾನೆ. ಅವನು ಬರುವುದನ್ನ ಧರೆಗೆ ದೊಡ್ಡವರು ಕಣ್ಣಿನಿಂದ ನೋಡಿಬಿಟ್ಟು ಓಡೋಗಿ ಬಂದು ಕೆಂಪಚಾರಿಯ ಮುಂಗೈ ಹಿಡಿದುಕೊಂಡು ಕೆಂಪಣ್ಣ ಈವಾಗ ನನ್ನ ಬಳಿಗೆ ಬಂದಿಯಪ್ಪ ಈಗಲಾದರು ನನಗೆ ಮಗನಾದೆಯಪ್ಪ ಅನ್ನುತ್ತಾರೆ. ಆಗ ಕೆಂಪಣ್ಣ ಸ್ವಾಮಿ ನಾನು ನಿಮಗೆ ಶಿಷ್ಯನಾದರೆ ನನಗೆ ಏನು ಭಾಗ್ಯವ ಕೊಡುತ್ತೀರಿ ಸ್ವಾಮಿ ಅನ್ನುತ್ತಾನೆ. ಆಗ ಧರೆಗೆ ದೊಡ್ಡವರು ಕೆಂಪಣ್ಣ ನೀನು ನನಗೆ ದತ್ತು ಮಗನಾದರೆ ನಾನು ನಿನಗೆ ಕೊಡುವ ಭಾಗ್ಯ ಏನೆಂದರೆ ನನ್ನ ಹರಕಲು ಜೋಳಿಗೆ ಮಾತ್ರ ಮುರುಕು ಬತ್ತಿ ಕೊಟ್ಟು ನಿನ್ನನ್ನ

ಭಿಕ್ಷಕ್ಕೆ ಕಳುಹಿಸುತ್ತೇನೆ ಎನ್ನುತ್ತಾರೆ. ಆಗ ಕೆಂಪಣ್ಣ ಏನಯ್ಯಾ ಜಂಗಮ ಈ ಭಾಗ್ಯ ಕೊಡುವುದಕ್ಕೆ ನನ್ನ ತಾಯಿ–ತಂದೆ, ಅಣ್ಣ–ಅತ್ತಿಗೆಯರ ಪ್ರಾಣ ತೆಗೆದು ಈ ಭಾಗ್ಯ ಕೊಡಲು ಕರೆದುಕೊಂಡು ಬಂದಿದೀಯಾ ಹಾಗೂ ನನ್ನನ್ನು ಭಿಕ್ಷೆಗೆ ಕಳುಸುತ್ತಿಯಾ ಎನ್ನುತ್ತಾನೆ. ನೀನು ನನ್ನ ಭಿಕ್ಷೆಗೆ ಕಳುಹಿಸಿದರೆ ನಾನು ಕಾಡಿನಲ್ಲಿ ಹೋಗಿ ಪ್ರಾಣ ಬಿಟ್ಟರೂ ಸರಿಯೇ ನಾನು ನಿನಗೆ ಮಗನಾಗುವುದಿಲ್ಲ ಹಾಗೂ ನಾನು ಭಿಕ್ಷೆ ಮಾಡುವುದಿಲ್ಲ ಎಂದು ಹೇಳುತ್ತಾನೆ.

ಧರೆಗೆ ದೊಡ್ಡವರಿಗೆ ಬಹಳ ಸಿಟ್ಟು ಬಂದು ಏಳು ಜನರ ಸಿದ್ದರನ್ನ ಕರೆಯುತ್ತಾರೆ. ಆಗ ಏಳು ಜನ ಸಿದ್ದರು ಓಡೋಡಿ ಬಂದು ಧರೆಗೆ ದೊಡ್ಡವರ ಪಾದಕ್ಕೆ ಕೈ ಮುಗಿಯುತ್ತಾರೆ. ಆಗ ಆ ಏಳು ಜನ ನಮ್ಮನ್ನ ಕರೆಯಲು ಕಾರಣ ಏನು ಗುರುಗಳೇ ಅಂದಾಗ ನಿಮ್ಮನ್ನ ಬರಲು ಹೇಳಿದ ಕಾರಣವೇನೆಂದರೆ ಈ ಸಿದ್ದನನ್ನು ಹನ್ನೆರಡು ಮಾರುದ್ದ ನೂಲಗ್ಗ ತೆಗೆದುಕೊಂಡು ಇವನ ಕೈ ಕಾಲು ಕಟ್ಟಿ ಇವನನ್ನು ಹಾವು, ಚೇಳು ಇರುವ ಗವಿಗೆ ಕೂಡಿ ಹಾಕಿರಿ ಎಂದರಂತೆ.

ಅಲ್ಲಿದ್ದ ಏಳು ಜನ ಸಿದ್ದರು ಕೆಂಪಣ್ಣನ ಕೈ ಕಾಲು ಕಟ್ಟಿ ಕಾಳಿಂಗನ ಗವಿಗೆ ಅವನನ್ನು ಹಾಕುತ್ತಾರೆ. ಆಗ ಅಲ್ಲಿದ್ದ ಹೆಬ್ಬಾವು ಇವನನ್ನ ಹಾಕಿದ ತಕ್ಷಣ ಕಚ್ಚಿಕೊಂಡು ಹನ್ನೆರಡು ಆಳುದ್ದ ಪಾತಾಳಕ್ಕೆ ಹೊರಟು ಹೋಗುತ್ತದೆ. ಆಗ ಮೇಲಿದ್ದ ಧರೆಗೆ ದೊಡ್ಡವರು ನೀನು ಈ ಕಾಳಿಂಗನ ಗವಿಯಲ್ಲಿ ಹನ್ನೆರಡು ವರುಷ ಬಾವಿ ಒಳಗೆ ಬಾಳು ಕಂದಾ ಎಂದರಂತೆ.

ಧರೆಗೆ ದೊಡ್ಡವರು ಶಾಪ ಕೊಟ್ಟು ಇಪ್ಪತ್ತು ಬೆರಳಿನ ಉಗುರೆಲ್ಲಾ ಭೂಮಿಗೆ ಹೆಪ್ಪಾಗಲಿ, ಹನ್ನೆರಡು ವರುಷದವರೆಗೆ ಮಗನೆ ನಿನ್ನ ತಾಯಿ–ತಂದೆ ಅಣ್ಣ ತಮ್ಮ ನಿನ್ನ ಜನ ಜಾತಿ ಎಲ್ಲರನ್ನು ಮರೆತುಕೋ, ನಿನ್ನ ಸಿರಿ ಸಂಪತ್ತ ಎಲ್ಲವನ್ನು ಮರೆತುಕೋ ಅಂತ ಶಾಪ ಕೊಡುತ್ತಾರೆ. ನಿನಗೆ ಕೆಟ್ಟ ಯೋಜನೆ ಹೋಗಿ, ನಿನಗೆ ಗುರುವಿನ ಜ್ಞಾನ ಬರಲಿ ಮನಗೆ ಅಂತ ಶಾಪ ಕೊಡುತ್ತಾರೆ. ಆಗ ಕೆಂಪಚಾರಿ ಹನ್ನೆರಡು ವರುಷ ಕಾಳಿಂಗನ ಗವಿಯೊಳಗೆ ಇರುತ್ತಾನೆ.

ಧರೆಗೆ ದೊಡ್ಡವರು ಕೆಂಪಣ್ಣನನ್ನ ಕಾಳಿಂಗ ಗವಿಯೊಳಗೆ ಹನ್ನೆರಡು ವರ್ಷ ಇರುವಂತೆ ಶಾಪಕೊಟ್ಟ ಮುಂದಕ್ಕೆ ಸಾಗಬೇಕಾದರೆ ಗುರುದೇವ ಮಾಚಪ್ಪ ವಾಸ ಮಾಡುವಂತಹ ಮನೆಗೆ ಸೋಮವಾರ ಹೋಗುತ್ತಾನೆ. ಮಾಚಪ್ಪ ಗುರುದೇವ ಈ ಮುಟ್ಟು ತಟ್ಟನ ಮನೆಗೆ ಯಾತಕ್ಕೆ ಬಂದಿದ್ದೀರಿ ಸ್ವಾಮಿ ಅನ್ನುತ್ತಾನೆ. ಆಗ ಧರೆಗೆ ದೊಡ್ಡವರು ಮಾಚಪ್ಪ ಈ ನರಲೋಕವೆಲ್ಲ ಮುಟ್ಟು ತಟ್ಟನಿಂದಲೇ ಆಗಿದೆ. ಆದ್ದರಿಂದ ಈ ಮುಟ್ಟು ತಟ್ಟು ನಿನ್ನಿಂದಲೇ ಕಳೆಯಬೇಕು, ಅದು ಹೇಗೆಂದರೆ ಹೆಣ್ಣು ಮಕ್ಕಳು ಮೂರು ದಿವಸ ಮನೆ ಬಿಟ್ಟು ಹೊರಗಿರಲಿ ಅಂದು ಅವರ ಮುಟ್ಟಾದ ಬಟ್ಟೆಯನ್ನೆ

ತಗೆದುಕೊಂಡು ಅವರಿಗೆ ಒಪ್ಪಿಸಿ ಅವರು ಕೊಟ್ಟಂತಹ ದಾನವನ್ನ ತೆಗೆದುಕೊಂಡು ನಾನು ಪಡೆದ ಭೂಮಿ ಮೇಲೆ ಬಾಳಿ ಬದುಕು ಮಗನೆ ಎನ್ನುತ್ತಾರೆ.

ಮಾಚಪ್ಪ ಹೇಳುತ್ತಾರೆ ಸ್ವಾಮಿ ನೀನು ನಮ್ಮ ಮನೆಗೆ ಈ ತುಂಬಿದ ಸೋಮವಾರ ಏಕೆ ಬಂದಿದೀರಿ ಸ್ವಾಮಿ ಅಂದಾಗ ನಾನು ಈ ತುಂಬಿದ ಸೋಮವಾರ ಈ ಹಗಲು ಮಾಂಸದ ಸಾರನ್ನ ನಾನು ಊಟ ಮಾಡಬೆಕು ಮಾಚಪ್ಪ ಅಂದರಂತೆ. ಆಗ ಮಗನೆ ಮಾಂಸ–ಮಾಂಸಕ್ಕೆಲ್ಲ ಯಾವ ಮಾಂಸ ಬಹಳ ರುಚಿಯಾಗಿದೆ ಕಂದಾ ಅಂದಾಗ ಆಗ ಮಡಿವಾಳ ಮಾಚಪ್ಪ ಕೈ ಜೋಡಿಸಿಕೊಂಡು, ಕೈಎತ್ತಿ ಮುಗಿದು ಸ್ವಾಮಿ ಈ ಸೋಮವಾರ ನನ್ನ ಮನೆಗೆ ಬಂದು ಮಾಂಸದ ಸಾರು ಕೇಳುತ್ತಿದ್ದಿಯಾ ನನ್ನ ಮನೆಯಲ್ಲಿ ನೀವು ಖಂಡಿತವಾಗಿ ಊಟ ಮಾಡುತ್ತೀರಾ ಅನ್ನುತ್ತಾರೆ.

ಧರೆಗೆ ದೊಡ್ಡವರು ಹೌದು ನಾನು ನಿಮ್ಮ ಮನೆಯಲ್ಲಿ ನಾನು ಈ ದಿನ ಮಾಂಸದ ಊಟ ಮಾಡುತ್ತೇನೆ. ಆದ್ದರಿಂದ ಯಾವ ಮಾಂಸ ಚೆನ್ನಾಗಿದೆ ಹೇಳು ಎಂದಾಗ ಆಗ ಮಾಚಯ್ಯ ಎಲ್ಲಾ ಮಾಂಸದ ಹೆಸರು ಹೇಳಿ ಗುರುವೇ ಮಾಂಸ–ಮಾಂಸಕ್ಕಿಂತ ಮನುಷ್ಯನ ಮಾಂಸ ಬಹಳ ರುಚಿಯಾಗಿದೆ ಅನ್ನುತ್ತಾನೆ. ಮಾಂಸ–ಮಾಂಸಕ್ಕೆಲ್ಲಾ ಮನುಷ್ಯ ಮಾಂಸ ಎಂದರೆ ಬಹು ರುಚಿ ಮನುಷ್ಯನ ಕೂದು ಅಡಿಗೆ ಮಾಡ್ತೀನಿ ಅದನ್ನ ತಿನ್ನುತ್ತೀರಾ ಮಾಯಿಕಾರ ಅನ್ನುತ್ತಾರೆ.

ಇಂತಹ ರುಚಿಯಾದ ಮಾಂಸದ ಊಟ ಮಾಡಲೇಬೇಕು ಆಗ ಧರೆಗೆ ದೊಡ್ಡವರು ಮುತ್ತಿನ ಜೋಳಿಗೆ ಕೈ ಹಾಕಿ ನಾಲ್ಕಾಣೆ ಹಣ ತೆಗೆದು ಮಾಚಪ್ಪನ ಕೈಗೆ ಕೊಡುತ್ತಾರೆ. ಆಗ ಮಾಚಪ್ಪ ಹಣದ ಆಸೆಗೆ ಮುಂದಿನ ಕೇಡು ಗೊತ್ತಿಲ್ಲದೆ ಅಂಗೈಯನ್ನು ಒಡ್ಡುತ್ತಾನೆ ಈಗ ಧರೆಗೆ ದೊಡ್ಡವರು ಹಣಕೊಟ್ಟು ಮಾಚಪ್ಪನ ಮನೆ ಬಿಟ್ಟ ತಲಕಾಡು–ಮಾಲಂಗಿ ಮಡುವಿನ ಎರಡು ಹೊಳೆಯು ಕಡೆಗೆ ಹೋಗಿ ಸ್ನಾನ ಮಾಡಿಕೊಂಡು ಶಿವ ಪೂಜೆ ಮಾಡಿಕೊಂಡು ನಿನ್ನ ಮನೆಗೆ ನಾನು ಬಂದು ಬಿಡುತ್ತೇನೆ ಅಂತ ಹೇಳಿ. ನಾನು ಮಾಂಸದ ಊಟ ಮಾಡಬೇಕಾದರೆ ಏಳು ವರುಷದ ಮೇಲಿನ ಮಗುವಾಗಬೇಕು ಒಂಬತ್ತು ವರುಷದ ಕೆಳಮಗನಾಬೇಕು ಅಂತ ಹೇಳಿ ಮಗನೇ ಅಂತಹ ಎಳೇ ಮಗನೆ ನೀನೆ ಕೂದು ನೀನೆ ಅಡುಗೆ ಮಾಡಬೇಕು ಅಂತ ಹೇಳುತ್ತಾರೆ. ಮಾಚಪ್ಪ ಧರೆಗೆ ದೊಡ್ಡವರು ಹೋದ ಮೇಲೆ ಮಂಚದ ಮೇಲೆ ಕುಳಿತುಕೊಂಡು ಕಣ್ಣಲ್ಲಿ ಕಣ್ಣೀರು ಸುರಿಸುತ್ತಾ ನಾನು ದೊಡ್ಡವರಿಗೆ ಮಾತು ಕೊಟ್ಟು ಮೋಸ ಹೋಗಿಬಿಟ್ಟೆ ಅಂತಹೇಳಿ ಮಂಚದ ಮೇಲೆ ಮಲಗಿದ್ದಾರೆ.

ಈ ಕಡೆ ಮಾಚಪ್ಪನ ಮಡದಿ ಮಲ್ಲಿಗೆ ಮಹದೇವಮ್ಮ ಸ್ನಾನಕ್ಕೆ ನೀರು ಕಾಯಿಸಿಟ್ಟು ಪೂಜೆಗೆ ಹೂಗಳನ್ನ ತಂದು ಇಟ್ಟ ಅಡಿಗೆ ಮಾಡಿಬಿಟ್ಟ ನನ್ನ ಪತಿ ದೇವರು ಮಾಚಪ್ಪ ಏಕೆ ಬಂದಿಲ್ಲ ಅಂತ ಹೇಳಿ ಎಲ್ಲ ಕಡೆ ಹುಡುಕುತ್ತಾಳೆ. ಎಲ್ಲೂ ಕಾಣಿಸಲಿಲ್ಲ

ಆಗ ಮಹದೇವಮ್ಮ ಹಿಂದಿನ ಮನೆಗೆ ಬಂದು ನೋಡುತ್ತಾಳೆ ಅಲ್ಲಿ ನೋಡಿ ಮಲಗಿರುವಂತಹ ಗಂಡನನ್ನು ನೋಡಿ ನಿಮಗೆ ಬಂದಿರುವಂತಹ ಕಷ್ಟ ನಮಗೂ ಸ್ವಲ್ಪ ಹೇಳು ಅನ್ನುತ್ತಾಳೆ.

ಮಲ್ಲಿಗೆ ಮಹದೇವಮ್ಮನಿಗೆ ಮಡಿವಾಳ ಮಾಚಯ್ಯ ಎಲ್ಲಾ ವಿಷಯವನ್ನ ಹೇಳುತ್ತಾನೆ.

ಮಲ್ಲಿಗೆ ಮಹದೇವಮ್ಮ ಸ್ವಾಮಿ ಬೇರೆ ಮಕ್ಕಳನ್ನ ಕರೆತಂದು ಮೋಸದಿಂದ ಅಡುಗೆ ಮಾಡಿ ಬಿಟ್ಟರೆ ಮಕ್ಕಳು ಪಡೆದಂತಹ ತಂದೆ-ತಾಯಿಗಳು ಖಂಡಿತವಾಗಿ ಬಿಡುವುದಿಲ್ಲ, ಧರೆಗೆ ದೊಡ್ಡವರು ಸಹ ಬಿಡುವುದಿಲ್ಲ ಎಳ್ಳಷ್ಟು ಸತ್ಯವೂ ಕೂಡ ಇರುವುದಿಲ್ಲ. ಆದುದ್ದರಿಂದ ಒಂದು ಕಣ್ಣು ಕಣ್ಣಲ್ಲಿ ದೇವಾ ನನಗೆ ಒಬ್ಬ ಮಗ ಮಗನಲ್ಲ ನನ್ನ ಹೊಟ್ಟೆಯಲ್ಲಿ ಹುಟ್ಟವನೆ ಕಂದಾ ವೀರಣ್ಣ ಅನ್ನುತ್ತಾಳೆ ನನ್ನ ಮಗ ಪಾಠ ಶಾಲೆಯಿಂದ ಬರುತ್ತಾನೆ. ಬಂದ ಮೇಲೆ ಅವನಿಗೆ ಊಟ ಉಪಚಾರ ಮಾಡಿಸಿ ಅವನನ್ನ ತೊಟ್ಟಲಿಗೆ ಕರೆದುಕೊಂಡು ಹೋಗಿ ಮಲಗಿಸಿ ಪ್ರಭುವೆ. ಆದರೆ ಅವನು ನಿದ್ರೆ ಮಾಡುವಂತಹ ಮಗನ ಮಾತ್ರ ನೀವು ಮೋಸದಿಂದ ಕೊಲ್ಲಬೇಡಿ. ಆದರೆ ಅವನು ಎಚ್ಚರ ಆದ ಮೇಲೆ ಅವನನ್ನ ಎತ್ತಿಕೊಂಡು ಬಂದು ಧರೆಗೆ ದೊಡ್ಡವರಿಗೆ ಕೈ ಮುಗಿದು ನನ್ನ ಮಗನನ್ನ ಕೊಂದು ಬಿಡಿ ಅಂದಾಗ ಪತಿ ದೇವ ಮಾಚಪ್ಪ ಎರಡು ಕಿವಿಗಳನ್ನು ಮುಚ್ಚಿಕೊಂಡು ಶಿವಾ ಶಿವಾ ಅಂತ ಹೇಳುತ್ತಾನೆ. ಆಗ ಮಾಚಯ್ಯ ಹೆತ್ತ ತಾಯಿ ಬಾಯಿಯಲ್ಲಿ ಇಂತ ಮಾತು ಬರವುದಾ ಮಡದಿ ಅಂತ ಹೇಳಿದಾಗ ಇವರು ಮಾತಾಡಿಕೊಳ್ಳತ್ತಿದ್ದ ಮಾತು ಧರೆಗೆ ದೊಡ್ಡವರಿಗೆ ಅರಿವಾಗಿ ಜಗದ್ಗುರುವು ಕಪ್ಪು ದೂಳ್ತ ತೆಗೆದುಕೊಂಡು ಮಾಚಪ್ಪನಿಗೆ ಉರುಬುತ್ತಾರೆ.

ಗಂಡ ಹೆಂಡತಿಯರಿಬ್ಬರು ಮನೆಯನ್ನೆ ಸ್ವಚ್ಛಗೊಳಿಸಿ ರಂಗೋಲೆ ಬಿಟ್ಟು, ಶೃಂಗಾರ ಮಾಡಿ, ನಡು ಮನೆಯೊಳಗೆ ಜ್ಯೋತಿ ಹಚ್ಚುತ್ತಾರೆ.

ಕತ್ತಿಯನ್ನ ತೆಗೆದುಕೊಂಡು ಕೈಯಲ್ಲಿ ಹಿಡಿದುಕೊಂಡು ಅವರ ಮಗನು ಬರುವ ದಾರಿಯನ್ನ ನೊಡುತ್ತಾರೆ. ಆಗ ಪಾಠ ಶಾಲೆ ಬಿಟ್ಟ ಮೇಲೆ ಅವನು ತನ್ನ ಮನೆಗೆ ಬರುತ್ತಿರುವಾಗ ಧರೆಗೆ ದೊಡ್ಡವರು ಇವನ ಭಕ್ತಿಯನ್ನ ನೋಡಬೇಕು ಅಂತಹೇಳಿ ಅರಳೀಕಟ್ಟೆ ಜಗಲಿಯ ಮೇಲೆ ಕುಳಿತುಕೊಂಡು ಕಂದಾ ವೀರಣ್ಣ ಅನ್ನುವವರು ಈ ಗುಂಪಿನೊಳಗೆ ಯಾರು ಅಂದರಂತೆ. ಆ ರೀತಿ ಅಂದ ತಕ್ಷಣ ಧರೆಗೆ ದೊಡ್ವರ ಬಳಿಗೆ ಓಡಿ-ಓಡಿ ಬರುತ್ತಾನೆ.

ವೀರಣ್ಣ ಧರೆಗೆ ದೊಡ್ಡವರ ಬಳಿಗೆ ಬಂದಾಗ ಧರೆಗೆ ದೊಡ್ಡವರು ಈ ಏಳು ವರುಷದ ಮಗನಿಗೆ ಎಲ್ಲ ವಿಷಯವನ್ನು ತಿಳಿಸುತ್ತಾರೆ. ಆಗ ವೀರಣ್ಣ ಸ್ವಾಮಿ ನಾನು

ನಿಮ್ಮ ಮಾತು ಮೀರಿದರು ನಮ್ಮ ತಂದೆಯ ಮಾತನ್ನ ಮೀರುವುದಿಲ್ಲ ನನ್ನ ಕೈ ಬಿಡಿ ನಾನು ಹೋಗಬೇಕು ಅನ್ನುತ್ತಾನೆ.

ಧರೆಗೆ ದೊಡ್ಡವರು ಅವನ ಕೈಯನ್ನ ಬಿಟ್ಟಾಗ ಪೀರಣ್ಣ ಓಡಿ-ಓಡಿ ಮನೆಗೆ ಬರುತ್ತಾನೆ. ಆಗ ಮನೆಯಲ್ಲಿ ಇವನ ತಂದೆ-ತಾಯಿಗಳು ಮಗನ ನೆನೆದುಕೊಂಡು ಸಂಕಟ ಪಡುತ್ತಾ ಅಳುತ್ತಾ ಕುಳಿತ್ತದ್ದಾಗ ಇಬ್ಬರು ಅಳುತ್ತಿದ್ದನ್ನ ನೋಡಿ ಯಾಕಪ್ಪ, ತಾಯಿ ಅಳುತ್ತಿದ್ದಿಯಾ ಎಂದು ಹೇಳುತ್ತಾನೆ. ಆಗ ಬಂದ ಮಗನನ್ನ ಊಟ ಮಾಡಿಸಿ ಅವನನ್ನ ತೊಟ್ಟಿಲಲ್ಲಿ ಮಲಗಿಸುತ್ತಾರೆ. ಆದರೆ ಅವನು ಮಲಗಲಿಲ್ಲ ಆಗ ಮಾಚಪ್ಪನಿಗೆ ಬಹಳ ಸಿಟ್ಟು ಬಂದು ಅವನು ಎರಡು ಏಟು ಹೊಡೆಯುತ್ತಾನೆ. ಏಟು ಹೊಡೆದ ಮೇಲೆ ಏಳು ವರ್ಷದ ಮಗ ಹಲ್ಲಿನ್ನ ಕಚ್ಚಿಕೊಂಡು ಎರಡೂ ಕಣ್ಣು ಮುಚ್ಚಿಕೊಂಡು ಮಲಗುತ್ತಾನೆ. ತಂದೆ-ತಾಯಿಗಳು ಮಲಗಿದ್ದ ಮಗನನ್ನ ನೋಡಿ ದುಃಖ ಪಡುತ್ತಾರೆ. ಆಗ ದುಃಖ ಪಟ್ಟುಕೊಂಡು ಮಗನ ಎತ್ತಿಕೊಂಡು ಬಂದು ಅವನ ಕತ್ತು ಕೊಯ್ಯುತ್ತಾನೆ. ಆಗ ಮಡಿವಾಳ ಮಾಚಪ್ಪ ಮಗನ ದೇಹದಿಂದ ಮಾಂಸದ ಅಡಿಗೆ ಮಾಡುತ್ತಾನೆ.

ಐದು ತರಹದ ಅಡಿಗೆ ಮಾಡಿ ಸಾರುಮಾಡಿ ತಾಯಿ ಮಲ್ಲಿಗೆ ದೇವಿ ಗುರುವಿನ ಪಾದ ನೆನೆಯುತ್ತಾರೆ. ಆಗ ಇವರು ನೆನೆಯುತ್ತಿದ್ದದ್ದ ಧರೆಗೆ ದೊಡ್ಡವರಿಗೆ ಗೊತ್ತಾಗಿ ಮಲ್ಲಿಗೆ ಮಹದೇವಮ್ಮನ ಸತ್ಯ ನೋಡಬೇಕು ಅಂತ ಹೇಳಿ ಧರೆಗೆ ದೊಡ್ಡವರು ದಯಮಾಡಿಸುತ್ತಾರೆ.

ಮಡಿವಾಳ ಮಾಚಪ್ಪ ಮಾತ್ರ ಮಲ್ಲಿಗೆ ಮಹಾದೇವಮ್ಮ ಇಬ್ಬರೂ ಧರೆಗೆ ದೊಡ್ಡವರನ್ನ ಪಟ್ಟಿ ಮಂಚಕ್ಕೆ ಕರೆದುಕೊಂಡು ಬಂದು ನಡು ಮನೆಯೊಳಗೆ ಭಾರಿ ಖಂಡಾಯ ಪೂಜೆ ಮಾಡಿ, ನಡು ಮನೆಯೊಳಗೆ ತಂಬೂರಿಗೆ ಪೂಜೆ ಮಾಡಿ ಧರೆಗೆ ದೊಡ್ಡಯ್ಯನವರು ಆಗಲೇ ಅಡಿಗೆ ಆಗಿದ್ದೀಯಾ ಅಂತ ಕೇಳುತ್ತಾರೆ ಆಗ ಮಾಚಯ್ಯನವರು ಖಂಡಿತವಾಗಿಯೂ ಆಗಿದೆ ಅಂದಾಗ ಧರೆಗೆ ದೊಡ್ಡವರು ಮಂಚದ ಮೇಲೆ ಬಂದು ಕುಳಿತುಕೊಳ್ಳುತ್ತಾರೆ ನನಗೆ ಊಟ ಬಡಿಸಿ ಎಂದಾಗ ಮಲ್ಲಿಗೆದೇವಿ ಮತ್ತು ಮಡಿವಾಳ ಮಾಚಪ್ಪ ಓಡೋಡಿ ಬಂದು ಗೊನೆ ಮುರಿದ ಬಾಳೆ ಎಲೆ ತಂದು ಭಾರಿ ಖಂಡಾಯಕ್ಕೆ ಎಡೆ ಹಾಕಿ ಮತ್ತು ಭಾರಿಸುವಂತಹ ತಂಬೂರಿಗೆ ಎಡೆ ಬಡಿಸಿ, ಮುತ್ತಿನ ಜೋಳಿಗೆಗೆ ಒಂದು ಎಡೆ ಬಡಿಸಿ, ನಿನ್ನಾ ದಾಳಕ್ಕೆ ಒಂದು ಎಡೆ ಬಡಿಸಿ ಬಿಟ್ಟು, ಕಾಯಿ ಹೊಡೆದು ಹಣ್ಣು ಮುರಿದು, ಕರ್ಪೂರ ಸಾಂಬ್ರಾಣಿ, ಬೆಳಗಬಿಟ್ಟು. ಈಗ ನಿಮ್ಮ ಪೂಜೆ ಮುಗಿಸು ಸ್ವಾಮಿ ಈಗಲಾದರೂ ಬಂದು ಊಟ ಮಾಡಿ ತಂದೆ ಎನ್ನುತ್ತಾರೆ.

ಧರೆಗೆ ದೊಡ್ಡವರು ಕಂದಾ ಐದನೆ ಎಡೆ ತಂದು ನನಗೆ ಬಡಿಸಪ್ಪ ಎಂದರಂತೆ. ಆಗ ಆ ರೀತಿ ಅಂದು ಬುಟ್ಟು ಊಟಕ್ಕೆ ಕುಳಿತುಕೊಳ್ಳುತ್ತಾರೆ.

ಧರೆಗೆ ದೊಡ್ಡವರು ಊಟಕ್ಕೆ ಕುಳಿತುಕೊಂಡ ಮೇಲೆ ಸತಿ-ಪತಿಗಳು ಬಾಳೆಯ ಎಲೆ ಇಟ್ಟು ಅವರು ಮಾಡಿರುವಂತಹ ಎಲ್ಲಾ ಆಹಾರವನ್ನ ಬಡಿಸುತ್ತಾರೆ. ಬಡಿಸಿ ಆದ ಮೇಲೆ ಅವರ ಪಾದಕ್ಕೆ ಶರಣು ಮಾಡಿ ಗುರುದೇವಾ ನಾವಿಬ್ಬರೂ ಈಗ ಮರೆಯಾಗುತ್ತೇವೆ ನೀವು ಊಟ ಮಾಡಿ ಸ್ವಾಮಿ ಅಂದರಂತೆ ಮಾಚಪ್ಪನವರು.

ಧರೆಗೆ ದೊಡ್ಡವರು ಅವರು ಹಾಕ್ಕಿರುವ ಮಾಂಸವನ್ನೆಲ್ಲಾ ಹಿಸುಕಿ ಹಿಸುಕಿ ನೋಡುತ್ತಾರೆ. ಆಗ ಅವರು ಹಾಕಿರುವ ಮಾಂಸದಲ್ಲಿ ಒಂದೂ ಕೂಡ ರುಚಿಯಿಲ್ಲ. ಅಂದರಂತೆ, ನೀನು ಹಾಕಿರುವ ಮಾಂಸದಲ್ಲಿ ಕಾಲಿನ ಮಾಂಸವಿಲ್ಲ, ಕೈಯಿನ ಮಾಂಸವಿಲ್ಲ, ತಲೆ ಮಾಂಸ ಮೊದಲಿಲ್ಲ, ತಲೆ ಮೆದುಳು ಕೂಡ ಇಲ್ಲ, ನಾಲಿಗೆ ಸ್ವರ ಕೂಡ ಇಲ್ಲ, ಮಾಚಪ್ಪ ಕಣ್ಣಿನ ಗುಳ್ಳೆ ಕೂಡ ಇಲ್ಲ ಅನ್ನುತ್ತಾರೆ.

ಮಡಿವಾಳ ಮಾಚಯ್ಯ ಸ್ವಾಮಿ ಎಲ್ಲವನ್ನೂ ಒಟ್ಟಾಗಿ ಸೇರಿಸಿ ಅಡುಗೆ ಮಾಡಿಬಿಟ್ಟಿದ್ದೇನೆ ಊಟ ಮಾಡಿ ಮೀಸಲು ಅಳಿಯಿರಿ ಸ್ವಾಮಿ ಅನ್ನುತ್ತಾನೆ.

ಧರೆಗೆ ದೊಡ್ಡವರು ಒಳ್ಳೆಯ ಮಾಂಸವನ್ನಲ್ಲೂ ಪೊಟ್ಟಣ ಕಟ್ಟಿ ಅಟ್ಟದ ಮೇಲೆ ಇಟ್ಟಕೊಂಡು ಈ ಕೆಟ್ಟ ಮಾಂಸಹಾರಗಳೆಲ್ಲವನ್ನ ಅಡಿಗೆ ಮಾಡಿ ನನಗೆ ಎಡೆ ಬಡಿಸಿದ್ದಿಯಾ ಕಂದಾ ಅಂದರಂತೆ. ಆಗ ಆ ಮಾಂಸವನ್ನೆಲ್ಲಾ ತೆಗೆದುಕೊಂಡು ಸತಿ-ಪತಿಗಳೂ ಅಡಿಗೆ ಮಾಡಿ ಪುನಃ ಊಟ ಬಡಿಸುತ್ತಾರೆ.

ಧರೆಗೆ ದೊಡ್ಡವರು ಮಡಿವಾಳ ಮಾಚಯ್ಯ ನಾನು ಊಟದ ಮುಂಭಾಗ ಕುಳಿತು ನಾನೊಬ್ಬನೆ ಊಟ ಮಾಡುವುದಿಲ್ಲ ಮಗನೇ ನೀನಾದರೂ ಸರಿಯೇ ಇಲ್ಲ ನಿನ್ನ ಮಡಿಯಾದರೂ ಸರಿಯೇ ಇಬ್ಬರಲ್ಲಿ ಯಾರಾದರೂ ಒಬ್ಬರು ಬಂದು ನನ್ನ ಜೊತೆ ಊಟ ಮಾಡಿರಿ ಎಂದು ಹೇಳುತ್ತಾರೆ.

ನನ್ನ ಜೊತೆ ಯಾರಾದರೂ ಒಬ್ಬರು ಬಂದು ಊಟ ಮಾಡಿರಿ ಎಂದಾಗ ನನ್ನ ಮಗನ ಮಾಂಸದ ಊಟವನ್ನ ನಾವು ಮಾಡಲಾರೆ ಎಂದಾಗ, ಧರೆಗೆ ದೊಡ್ಡವರು, ನಿನ್ನ ಹೊಟ್ಟೆಯಲ್ಲಿ ಒಬ್ಬ ಮಗ ಹುಟ್ಟಿದಾನಲ್ಲ ನಿನ್ನ ಮಗ ವೀರಣ್ಣನ ಜೊತೆಯಲ್ಲಿ ನಾನು ಊಟ ಮಾಡುತ್ತೇನೆ ಅವನನ್ನ ಕಳುಹಿಸು ಮಾಚಪ್ಪ ಎನ್ನುತ್ತಾರೆ. ಆಗ ನನ್ನ ಮಗ ವೀರಣ್ಣ ಅವನ ಅಜ್ಜಿ ಮನೆಗೆ ಹೋಗಿದ್ದಾನೆ ಗುರುವೆ ನೀವು ಊಟ ಮಾಡಿ ಎಂದಾಗ ನಾನು ನಿನ್ನ ಮಗ ಬರುವವರೆಗೂ ನಾನು ಊಟ ಮಾಡುವುದಿಲ್ಲ, ನಾನು ನಿನ್ನ ಮಗ ಬರುವವರೆವಿಗೂ ನಾನು ಮನೆ ಬಿಟ್ಟು ಹೋಗುವುದಿಲ್ಲ ಅನ್ನುತ್ತಾರೆ.

ಧರೆಗೆ ದೊಡ್ಡವರಿಗೆ ಸುಳ್ಳು ಮಾತು ಹೇಳಬಾರದೆಂದು ನನ್ನ ಮಗನನ್ನು ಕೊಯ್ದು ಅಡಿಗೆ ಮಾಡಿಬಿಟ್ಟಿದ್ದೇವೆ ಎಂದಾಗ ಧರೆಗೆ ದೊಡ್ಡವರು ನಿಮ್ಮ ಗಂಡ-ಹೆಂಡೀರ ಮಾತು ನಾನು ಒಪ್ಪುವುದಿಲ್ಲ ಅನ್ನುತ್ತಾರೆ. ಧರೆಗೆ ದೊಡ್ಡವರು ನೀವು ಮೂರು ಸಲ ವೀರಣ್ಣ. ವೀರಣ್ಣ ಅಂತ ಕರೀರಪ್ಪ ಎಂದಾಗ ಗುರುವಿನ ಮಾತನ್ನು

ಮೀರಬಾರದು ಅಂತ ಹೇಳಿ ವೀರಣ್ಣ ವೀರಣ್ಣ ಎದ್ದು ಬಾರೋ ಅಂತ ಮೂರು ಸಲ ಕರೆಯುತ್ತಾರೆ ಆಗ ಧರಗೆ ದೊಡ್ಡವರು ಮಾಚಪ್ಪ ನೀವು ಕರೆದ ಹಾಗೆ ನಾನು ಒಂದು ಸಾರಿ ಕರೆಯುತ್ತಾನೆ. ನಾನು ಕರೆದ ಮೇಲೆ ಅವನೇನಾದರೂ ಬಂದು ಬಿಟ್ಟರೆ ಕಂದಾ ನನ್ನ ಕಪ್ಪಡಿ ಕೈಲಾಸದಲ್ಲಿ, ನನ್ನ ಚಿಕ್ಕಲ್ಲೂರು ಮಠ ಮೆನಯೊಳಗೆ ನನ್ನ ರಾಜ ಬೊಪ್ಪೇಗೌಡ ಪುರಕ್ಕೆ ನಿನ್ನ ಮಗನ ಫಲಾರದಯ್ಯನ ಮಾಡಿಕೊಳ್ಳುತ್ತೀನಿ ಕಂದ ನಿನ್ನ ಮಗ ಬಂದು ಬಿಟ್ಟರೆ ನಿನ್ನ ಮಗನ ನನ್ನ ಮಗನ ಮಾಡಿಯಪ್ಪ ನಿನ್ನ ಮಗನ ನಾನು ಶಿಷ್ಯನ ಮಾಡಿಕೊಳ್ಳುತ್ತೇನೆ. ಅಂದಾಗ ಮಾಚಪ್ಪ ಆಗಲಿ ತಂದೆ ನಮ್ಮ ಮಗನ ಕರೆದು ಶಿಷ್ಯನ ಮಾಡಿಕೊಳ್ಳಿ ಎನ್ನುತ್ತಾರೆ.

ಧರೆಗೆ ದೊಡ್ಡವರು ಕಪ್ಪು ದೂಳ್ತ ತೆಗೆದು ಮಗನ ಕಡಿದಿರುವ ಜಾಗಕ್ಕೆ ಅಂದರೆ ಚಿನ್ನ ಹೊಸ್ತಿಲಿನ ಮೇಲೆ ಕಪ್ಪು ದೂಳ್ತ ಇಟ್ಟು ಬುಟ್ಟು ಅವನ ಏನಂತ ಕರಿತಾರೆ ಅಂದರೆ. ಪರಂಜ್ಯೋತಿಯವರ ಮಗನೇ ಫಲಾರದಯ್ಯ ಎದ್ದು ಬಾರೋ ಎಂದೂ ಮೂರು ಸಲ ಕೂಗಿದ ತಕ್ಷಣ ಅಯ್ಯೋ ಭೂಮಿಯಿಂದ ದೇವ ಹುತ್ತ ಮೂಡಿದ ಹಾಗೆ ಎದ್ದು ಮೂಡಿ ಬರುತ್ತಾನೆ ಆಗ ಮೂಡಿ ಬಂದು ಧರೆಗೆ ದೊಡ್ಡವರ ಬಳಿಗೆ ಓಡಿ-ಓಡಿ ಬರುತ್ತಾನೆ. ಆಗ ಬಂದಂತಹ ಮಗನ ನೋಡಿ ತಂದೆ-ತಾಯಿಯರಾದ ಮಾಚಪ್ಪ ಮತ್ತು ಮಲ್ಲಿಗೆ ಮಹದೇವಮ್ಮ ಕಿಲಕಿಲನೆ ನಗುತ್ತಾರೆ. ಅಪ್ಪಾ ಮಗನೇ ನೀನು ನಮ್ಮ ಮಗನಲ್ಲ ನೀನು ಧರೆಗೆ ದೊಡ್ಡವರ ಮಗನು ಅಂದು ಹೇಳುತ್ತಾರೆ. ಆಗ ಧರೆಗೆ ದೊಡ್ಡವರು ನೀವು ಬೊಪ್ಪೇಗೌಡನ ಪುರಕ್ಕೆ ಬಂದು ಬಿಡಿ ನಿಮ್ಮನ್ನು ಅಲ್ಲಿ ಒಕ್ಕಲು ಸಹಿತವಾಗಿ ಮಾಡುತ್ತೇನೆ ಅಂತ ಹೇಳಿ ಅವರನ್ನ ಕರೆದುಕೊಂಡು ವೀರಣ್ಣನ್ನು ಫಲಾರದಯ್ಯನ್ನಾಗಿ ಮಾಡಿಕೊಂಡು ಬೊಪ್ಪೇಗೌಡನ ಪುರಕ್ಕೆ ಬರುತ್ತಾರೆ.

ಮಾಚಪ್ಪ ಮಲ್ಲಿಗೆ ದೇವಿಯನ್ನ ಆ ಚಂದ್ರ ಶಾಲೆಯೊಳಗೆ ಬಿಟ್ಟು ಫಲಾರದಯ್ಯನನ್ನ ಕರೆದುಕೊಂಡು ಜಗಂಜ್ಯೋತಿ ಧರೆಗೆ ದೊಡ್ಡಯ್ಯನವರು ತನ್ನ ಜೊತೆಯಲ್ಲಿಯೇ ಇಟ್ಟುಕೊಂಡು ನನ್ನಪ್ಪ ರಾಜಬೊಪ್ಪೇಗೌಡನ ಪುರದ ಒಳಗೆ ಅವರು ಹುಲಿಯ ಚರ್ಮನವನ್ನ ಹಾಸಿ ವಿಭೂತಿಯನ್ನು ಹರಡಿ ಅಲ್ಲಿಯೇ ಅವರು ಮಲಗುತ್ತಾರೆ.

ಧರೆಗೆ ದೊಡ್ಡವರು ಫಲಾರದಯ್ಯನನ್ನ ಶಿಷ್ಯನ್ನಾಗಿ ಮಾಡಿಕೊಂಡ ಮೇಲೆ ಅವರು ರಾಜ ಬೊಪ್ಪೇಗೌಡನ ಪುರದ ಉರಿಗದ್ದಿಗೆಯ ಮೇಲೆ ಕುಳಿತುಕೊಂಡು ಗುರುವು ಜಿಂಕೆಯ ಚರ್ಮವನ್ನ ತೆಗೆದು ಬೆನ್ನಿಂದೆ ಬುಟ್ಟುಕೊಂಡು ಭಾರಿ ಖಂಡಾಯ ಭೂಮಿಗೆ ಜಡಿದು ಖಂಡುಗ ಜ್ಞಾನದ ಬುಕ್ಕನ್ನು, ಕಾಲ ಜ್ಞಾನದ ಬುಕ್ಕನ್ನು ಮತ್ತು ತಾಮ್ರದ ಶಾಸನಗಳನ್ನು ತೊಡೆಯ ಮೇಲೆ ಇಟ್ಟುಕೊಂಡು ಅವರು ಕಲಿಯನ್ನ ಓದುತ್ತಾರೆ ಕಲಿಯನ್ನ ಸಾರುತ್ತಾರೆ ಆಗ ಧರೆಗೆ ದೊಡ್ಡವರು ನಾನು ಸಾರಿದಂತಹ

ಕಲಿಯೇ ದೇವಾ ನನ್ನ ಕಣ್ಣ ಮುಂದೆ ಬರುತ್ತಲ್ಲ ಅಂತೇಳಿ ಅವರು ಶಿಶು ಮಕ್ಕಳನ್ನು ದೇವ ಪ್ರೇಮದಲ್ಲಿ ಕೂಗುತ್ತಾರೆ.

ಧರೆಗೆ ದೊಡ್ಡವರು ಎಲ್ಲಾ ಶಿಶು ಮಕ್ಕಳು ಕರೆದ ತಕ್ಷಣ ಓಡಿ–ಓಡಿ ಬರುತ್ತಾರೆ ಆಗ ಬಂದ ಶಿಶು ಮಕ್ಕಳು ಗುರುವೆ ಅಪ್ಪಾಜಿ ನಮ್ಮನ್ನ ಯಾವ ಕೆಲಸಕ್ಕೆ ಕರೆದಿದ್ದೀರಿ ಎಂದಾಗ ಆಗ ಧರೆಗೆ ದೊಡ್ಡವರು ಎಲ್ಲರನ್ನು ತನ್ನ ಪಕ್ಕದಲ್ಲಿ ಕುಳ್ಳರಿಸಿಕೊಂಡು ನಾನು ಸೂರ್ಯ ಚಂದ್ರಾದಿಗಳನ್ನ ಮತ್ತು ನರಲೋಕವನ್ನೆಲ್ಲ ಪಡೆದುಕೊಂಡು ಬಂದಿದ್ದೇನೆ ಈ ನಡುವೆ ನರಲೋಕದಲ್ಲಿ ನರಮಾನವರ ಪಡೆದಿದ್ದೇನೆ ಮಗಳೇ ಈ ನರಮಾನವರ ಕಲಿ ನನ್ನ ಕಣ್ಣ ಮುಂದೆ ಬಂದಿತ್ತಲ್ಲ ಈ ನರಮಾನವ ಕಲಿಯ ನಾನು ನನ್ನ ಕಣ್ಣಾರೆ ನೋಡಲಾರೆ ದೊಡ್ಡಮ್ಮ ತಾಯಿ ಕೇಳುತ್ತಾರೆ ಸ್ವಾಮಿ ನರ ಮಾನವರ ಕಲಿ ಅಂದರೆ ಯಾವ ಕಲಿ ಅದೇನು ಹೇಳಿಬಿಡಿ ನನ್ನಪ್ಪ ಅನ್ನುತ್ತಾಳೆ.

ಧರೆಗೆ ದೊಡ್ಡವರು ಅವ್ವಾ ಕಲ್ಲು ಕರಗುವ ಹೊತ್ತು ಆ ಕಲಿಯನ್ನ ನಾನು ಸಾರಬೇಕು ಅಂತಹೇಳಿದಾಗ ದೊಡ್ಡಮ್ಮ ಮುಂದೆ ಬರುವ ಕಲಿಯನ್ನ ನೀವು ಹೇಳಿ ಅಂದಾಗ ಪರಂಜ್ಯೋತಿಯವರು ನಿಮಗೆ ಮುಂದೆ ಬರುವ ಕಲಿ ಹೇಳಬೇಕಾ ಆ ಕಲಿಯಿಂದ ನಿಮಗೆ ಏನೂ ಪ್ರಯೋಜನ ಮಗಳೇ ಅಂದರಂತೆ. ಆಗ ದೊಡ್ಡಮ್ಮ ನಾಳೆ ದಿವಸ ನಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗೆ ಇಂತಿಂಥ ಕಲಿಗಾಲ ಬರುತ್ತದೆ ಅಂತ ಹೇಳುತ್ತೇವೆ ಆದ್ದರಿಂದ ನಾಳೆ ಬರುವ ಕಲಿಗಳ ನೀವು ಹೇಳಿ ಅಂತ ದೊಡ್ಡಮ್ಮನವರು ಧರೆಗೆ ದೊಡ್ಡವರಿಗೆ ಹೇಳುತ್ತಾರೆ.

ಧರೆಗೆ ದೊಡ್ಡವರು ಹಾಗಾದರೆ ನಾನು ಮುಂದೆ ಬರುವ ಕಲಿನ ಹೇಳುತ್ತೇನೆ. ನೀನು ತಾಮ್ರದ ಶಾಸನಗಳನ್ನು ತೆಗೆದುಕೊಂಡು ಬರೆದುಕೋ ಮಗಳೇ ಅಂದರಂತೆ ಆಗ ಧರೆಗೆ ದೊಡ್ಡವರು ಹೇಳಿದ ಕಲಿಯನ್ನ ಬರೆದುಕೊಳ್ಳುತ್ತಾ ಹೋಗುತ್ತಾರೆ. ಅದು ಏನೆಂದರೆ ನಾನು ಬರುವಾಗ ಬದನಾಳು ದಿಕ್ಕಿನಿಂದ ಕಲಿ ಉಕ್ಕಿ ಬರುತ್ತಿತ್ತು. ಉಕ್ಕಿ ಬರುವಂತ ಕಲಿ ಕಾಲದಲ್ಲಿ ಹಿಡಿದು ನೀನು ಯಾರಪ್ಪ ಅಂತ ಕೇಳಿದ್ದೆ ನಾನು ಕಲಿ ಮನುಷ್ಯ ಬುದ್ಧಿ ಅಂತ ಹೇಳಿದ್ದ. ಆಗ ಆ ಕಲಿ ತಂದೆ ತಾಯಿಗಳ ನೋಡಿಬುಟ್ಟ ತಾಯಮ್ಮನ ಬಲದಲ್ಲಿ ಬುಟ್ಟುಕೊಂಡು ತಂದೆಯನ್ನ ಎಡದಲ್ಲಿ ಬುಟ್ಟುಕೊಂಡು ಕೈ ಹಿಡಿದ ಹೆಂಡತಿಯನ್ನ ಹೆಗಲ ಮೇಲೆ ಹೊತ್ತುಕೊಂಡು ಕಲಿ ಅಂತ ಹೇಳಿ ಸಾರಿಕೊಂಡು ಬರುವಾಗ, ತಾನು ನಡೆದುಕೊಂಡು ಬರುವಂತ ಪಾದರಕ್ಷೆ ಹೆಂಡತಿ ನಡೆಯುವಂತ ಪಾದರಕ್ಷೆ, ಹೆತ್ತ ತಾಯಿ ಮೇಲೆ ಹೊರಸಿಕೊಂಡು ತಾನು ನಡೆಯುವಂತ ಪಾದರಕ್ಷೆಯನ್ನ ತಾಯಿ ಮಡಿಲಲ್ಲಿ ಕಟ್ಟಿಸಿಕೊಂಡು ಬರುವಾಗ, ನಾನು ಅವನನ್ನು ನಾ ಕೇಳಿದಾಗ ನಾನು ಎಲ್ಲಾ ವಿಷಯವನ್ನು ಕೂಲಂಕುಷವಾಗಿ ಹೇಳಿದಾಗ ಧರೆಗೆ ದೊಡ್ಡವರು ಎರಡು ಕಣ್ಣುಗಳನ್ನು ಮುಚ್ಚಿಕೊಂಡು ನೀನು ಎಲ್ಲಿಗೆ ಹೋಗುತ್ತಿದ್ದೆಯಪ್ಪ

ಅಂತ ಕೇಳುವಾಗ ನಾನು ಬಲಿ ಚಕ್ರವರ್ತಿ ಪಟ್ಟಣಕ್ಕೆ ಕರ್ಮ ಕಳೆಯುವುದಕ್ಕೆ ಹೋಗುತ್ತೇನೆ ಅಂತ ಕಲಿ ಹೇಳಿದನು ಎಂದು ದೊಡ್ಡಮ್ಮನಿಗೆ ಹೇಳುತ್ತಾನೆ.

ಸ್ವಾಮಿ ಧರೆಗೆ ದೊಡ್ಡವರು ಇವನನ್ನ ಮುಂದಕ್ಕೆ ಬಿಡಬಾರದು ಅಂತಹೇಳಿ ನೋಡಪ್ಪ ಕಲಿ ಈ ತಲಕಾಡು-ಮಾಲಂಗಿಯ ಆನೆ ಉದ್ದ ನೀರಿಗಿಳಿದು ಮುಳುಗಿ ಸ್ನಾನ ಮಾಡಿಕೊಂಡು ಮುಂದಕ್ಕೆ ಹೋಗಿ ಕರ್ಮ ಕಳೆಯುತ್ತದೆ ಅಂತ ಹೇಳಿ ಬುದ್ಧಿ ಕಲಿ ಮನಸಾರೆ ತಾಯಿ-ತಂದೆ ಮುಳುಗಿ ಸ್ನಾನ ಮಾಡುವಾಗ ಧರೆಗೆ ದೊಡ್ಡವರು ಕಲಿಯನೆತ್ತಿಯ ಮೇಲೆ ಅವರ ತಂದೆ-ತಾಯಿಗಳ ನೆತ್ತಿಯ ಮೇಲೆ ಬಲದ ಪಾದ ಎತ್ತಿ ಮಡಗಿ ಕಲಿಯ ಹೆಂಡತಿ ಕತ್ತಿನ ಮೇಲೆ ಎಡದ ಪಾದ ಎತ್ತಿ ಮಡಗಿ ಅವರನ್ನ ಜಗ್ಗಿಸಿ ತುಳಿದುಬಿಟ್ಟು ಅವರನ್ನ ಪಾತಾಳ ಲೋಕಕ್ಕೆ ಕಳುಹಿಸಿಬುಟ್ಟು ಆಗ ಹೇಳುತ್ತಾರೆ ಧರೆಗೆ ದೊಡ್ಡವರು ಏನೇ ಕಲಿ ಮನುಷ್ಯ ನನ್ನ ಕಣ್ಣು ಮುಂದೆ ಈ ರಿತಿ ಕಲಿ ಸಾರಿಕೊಂಡು ಬಂದಿಯಲ್ಲ ಅದಕ್ಕಾಗಿ ನಿನ್ನ ಪಾತಾಳಕ್ಕೆ ತುಳಿದಿದ್ದೇನೆ, ನೀನು ಹೋಗಿರುವಂತಹ ಪಾತಾಳಕ್ಕೆ ನಾಳೆ ದಿನ ನಾನೇ ಹೊರಟು ಹೋಗುತ್ತಾನೆ ಎಂದರಂತೆ.



ಧರೆಗೆ ದೊಡ್ಡವರು ಹೇಳುತ್ತಾರೆ ನಾವು ಪಾತಾಳಕ್ಕೆ ಹೋದ ಮೇಲೆ ನಿಮ್ಮ ಭೂಲೋಕಕ್ಕೆ ಯಾವ ರೀತಿ ಬಿಡ್ತೀನಿ ಅಂದರೆ ನಿಮ್ಮ ತಾಯಿಯನ್ನ ಛಾಯಾದೇವಿ ಮಾಡುತ್ತಾನೆ ನಿಮ್ಮ ತಂದೆಯನ್ನ ಸೂರ್ಯ ದೇವನನ್ನಾಗಿ ಮಾಡುತ್ತೇನೆ ಅವರ ಗರ್ಭಕ್ಕೆ ನಿನ್ನ ಹಾಕುತ್ತಾನೆ ಈಗ ನೀನು ಕಲಿ ಮನುಷ್ಯ ಆಗಿದ್ದೀಯಾ ನಾಳೆ ಬರುವಂತಹ ಕಾಲಕ್ಕೆ ನಿನ್ನ ಕಲಿಪುರಷನನ್ನಾಗಿ ಮಾಡುತ್ತೇನೆ ಎಂದು ಹೇಳುತ್ತಾರೆ. ಈ ರೀತಿ ವರ ಕೊಟ್ಟು ಬಂದ ರೀತಿ ಈಗ ಕಲಿ ಮನುಷ್ಯ ಕಾಲ ಬಂದೋಯ್ತು ದೊಡ್ಡಮ್ಮ ಈ ಕಲಿ ಮನುಷ್ಯ ಹೋಗಿ ಕಲಿಪುರುಷ ಶನಿದೇವರಾಗಿ ಈ ನರ ಲೋಕಕ್ಕೆ ಬರುತ್ತಾನೆ ಆಗ ಅವನು ಬರುವಾಗ ನಾಳೆ ಭೂಮಿ ಗುಡುಗುತ್ತದೆ. ಬಾಲಚುಕ್ಕಿ ಮಾಡುತ್ತದೆ ಕುತ್ತಿಗೆ ಕೊಂಬು ಉಡುತ್ತದೆ. ನುಚ್ಚಕ್ಕಿಗೆ ಹುಳು ಬರುತ್ತದೆ. ಹನ್ನೆರಡು ವರುಷದಿಂದ ಇದ್ದಂತ ಕಬ್ಬಿಣ ನಾಳೆ ನುಚ್ಚು-ನುಚ್ಚಾಗಿ ಉದುರುತ್ತದೆ. ಗುರು-ಗುರುಗಳಿಗೆ ಗುದ್ದಾಟ ಬರುತ್ತದೆ ಎಂದೂ ಹೇಳುತ್ತಾ ನಾನು ಹೇಳಿದ ಮಾತುಗಳನ್ನು ಜ್ಞಾನವಾಗಿ ಬರೆಯವ್ವ ನನ್ನ ಕಂದಾ ಎಂದು ಹೇಳುತ್ತಾ ಮುಂದೆ ಹೇಳುತ್ತೇನೆ ಕೇಳು ತಾಯಿ ಈ ನರಲೋಕದಲ್ಲಿ ಅನ್ನ ಇರುವುದಿಲ್ಲ ಅನ್ಯಾಯ ಹೆಚ್ಚುತ್ತಾ ಹೋಗುತ್ತದೆ ಕಾವಿ ಹಾಕಿಕೊಂಡು ಹೋದರೆಲ್ಲಾ ಕಳ್ಳರಾಗಿ ತಿರುಗುತ್ತಾರೆ ಕಂದ ತಾಯಿ, ದಾಸಯ್ಯ-ಗೀಸಯ್ಯರೆಲ್ಲ ನಾಳೆ ದೇಶಾಂತರ ಹೋಗುತ್ತಾರೆ ನಾಳೆ ಜೋಗಯ್ಯ-ಗೊರವಯ್ಯ ನಾಳೆ ಗೋಳಾಡಿ ಸಾಯುತ್ತಾರೆ ಎಂದು ಹೇಳುತ್ತಾ ನಾಳೆ ಊರು ಕಾಡಾಗುತ್ತದೆ. ಕಾಡು ಊರಾಗುತ್ತದೆ ತಾಯಿ ಕೇಳು ನಾಳೆ ಧರ್ಮ ಅನ್ನೋರು ಕರ್ಮ ಆಗುತ್ತದೆ ತಾಯಿ ನಾಳೆ ಆಡುವ ಮಕ್ಕಳ ಮಾತು ಮುಂದೆ ಬರುತ್ತದೆ. ನಾಳೆ ತಲೆ. ಬಲಿತವರ ಮಾತು ಹಿಂದೆ ಹೋಗುತ್ತದೆ. ಅವ್ವಾ ದೊಡ್ಡಮ್ಮ, ಅತ್ತೆ, ಸೊಸೆ ಆಗುತ್ತಾಳೆ, ಸೊಸೆ ಅತ್ತೆ ಆಗುತ್ತಾಳೆ ಕೇಳವ್ವಾ ಎಂದು ಹೇಳುತ್ತಾರೆ.

ಇನ್ನೂ ಮುಂದೆ ಏನು ನಡೆಯುತ್ತದೆ ಎಂದರೆ ದೊಡ್ಡಮ್ಮ ನಾಳೆ ಅತ್ತೆಗೆ ಅರಕಲು ಚಾಪೆ, ಸೊಸೆಗೆ ಮುಕ್ಕಾಲು ಮಂಚ ಆಗುತ್ತದೆ ತಾಯಿ. ನಾಳೆ ಅರಸ ಆಳಾಗುತ್ತಾನೆ. ಆಳು ಅರಸನಾಗುತ್ತಾನೆ ದೊಡ್ಡಮ್ಮ ತಾಯಿ ದೊಡ್ಡಮ್ಮ ನಾಳೆ ರಾಜರಾಜರುಗಳಿಗೆಲ್ಲ ಗೋಜಲಾಟ ಬರುತ್ತದೆ. ತಾಯಿ ಅಂತ ಹೇಳುತ್ತಾ ನೋಡು ತಾಯಿ ನಾಳೆ ಈ ರಾಜ್ಯದಲ್ಲಿ ಪಡೆದಿರುವಂತಹ ರಾಜರೆಲ್ಲ ನಲವತ್ತೆಂಟು ಜನ ರಾಜರು ರಾಜ್ಯವನ್ನು ಬಿಡುತ್ತಾರೆ ತಾಯಿ ನಾಳೆ ಮೈಸೂರು ಮಹಾರಾಜ ರೈತರಾಗಿ ತಿರುಗುತ್ತಾನೆ ದೊಡ್ಡಮ್ಮ ಎಂದು ಹೇಳುತ್ತಾ ಇದನೆಲ್ಲ ಬರೆದುಕೊ ಎಂದು ಧರೆಗೆ ದೊಡ್ಡವರು ತಾಯಿ ದೊಡ್ಡಮ್ಮನಿಗೆ ಹೇಳುತ್ತಾರೆ.

ದೊಡ್ಡಮ್ಮ ನಾ ಹೇಳುವುದನ್ನೆ ಬರೆಮಕೋ ನಾಳೆ ಅಟ್ಟಾ ಬೆಟ್ಟವಾಗುತ್ತದೆ ಗದ್ದೆ ಹೊಲ ಆಗುತ್ತದೆ. ನೋಡು ತಾಯಿ ನಾಳೆಯೊಳಗೆ ರಾಜ್ಯರಾಜ್ಯಗಳ ಮೇಲೆ ರಾಗಿಗೆ ರೋಗ ಬರುತ್ತದೆ ಉಣ್ಣುವಂತ ಅನ್ನವನ್ನ ತಕ್ಕಡಿಯಲ್ಲಿ ತೂಗಬೇಕು ತಾಯಿ ದೊಡ್ಡಮ್ಮ ಅಂತ ಹೇಳುತ್ತಾರೆ. ನೋಡು ತಾಯಿ ದೊಡ್ಡಮ್ಮ ನಾಳೆ ಗರತಿ ಗೌಡಿಯಾಗಿ ಗೌಡಿ ಗರತಿಯಾಗಿ ನಾಳೆ ಹುಟ್ಟುವ ಮಕ್ಕಳಿಗೆ ಅನ್ನವು ಸಿಗದಂತೆ ಆಗುತ್ತದೆ ದೊಡ್ಡಮ್ಮ ಅವ್ವಾ ತಾಯಿ ಮಾತು ಕಲಿತವರು ಹೊಟ್ಟೆ ತುಂಬಾ ತಿನ್ನುತ್ತಾರೆ. ಅಮ್ಮ ಮಾತು ಕಲಿಯದಿದ್ದ ಜನರು ಅವ್ವಾ ಅನ್ನ ಇಲ್ಲದೆ ನರಳಿ–ನರಳಿ ಸಾಯುತ್ತಾರೆ ಸತ್ತು ಸ್ವರ್ಗ ಸೇರುತ್ತಾರೆ ತಾಯಿ ಅಂದರಂತೆ ನಾಳೆ ಹೆಣ್ಣು ಜನ್ಮ ಇರಬೇಕು ಗಂಡು ಎರಡು ಕೋಟಿ ಗಂಡು ಏಳು ಕೋಟಿ ಆದ ಮೇಲೆ ಅವ್ವಾ ಹೆಣ್ಣಿಗೆ ನನ್ನ ಕಂದಾ ಗಂಡಿಲ್ಲದಂಗೆ ಆಗುತ್ತದೆ ತಾಯಿ ಅನ್ನುತ್ತಾರೆ.

ನೋಡು ತಾಯಿ ನಾಳೆ ಏಳು ವರ್ಷದ ಹೆಣ್ಣು ಮಗಳು ಋತುಮತಿ ಆಗುತ್ತಾಳೆ. ನಾಳೆ ಏಳು ವರ್ಷದ ಮಗಳು ಎರಡು ಮಕ್ಕಳಿಗೆ ತಾಯಿಯಾಗುತ್ತಾಳೆ ದೊಡ್ಡಮ್ಮ ನಾಳೆ ಜಂಗುಮರ ಮಠದಲ್ಲಿ ಜೋಡು ತೊಟ್ಟಿಲು ಕಟ್ಟುತ್ತಾಳೆ.

ತಾಯಿ ಮುಂದೆ ಹೇಳುತ್ತೇನೆ ಕೇಳು ತಾಯಿ ನಾಳೆ ಕಲ್ಲೂರು ತೋಪಿನಲ್ಲಿ ವಾರಕ್ಕೆ ಒಂದು ದಿವಸ ಸಂತೆ ಕಟ್ಟಲೇಬೇಕು ಆ ಸಂತೆಯಲ್ಲಿ ಎತ್ತಿನ ವ್ಯಾಪಾರ ಆಗುತ್ತದೆ ನಾಳೆ ಎತ್ತಿನ ಬೆಲೆ ಎಮ್ಮೆಯ ಬೆಲೆಗೆ ಮಾರಬೇಕು ನಾಳೆ ಟಗರು ಮಾರಬೇಕು ತಾಯಿ. ನಾಳೆ ಟಗರು ಮಾರುವ ಬೆಲೆಗೆ ಕೋಳಿ ಮಾರಲೇಬೇಕು ತಾಯಿ ನಾಳೆ ಹುಟ್ಟಿದ ಹೆಣ್ಣು ಮಕ್ಕಳನ್ನು ಸಂತೆಯೊಳಗೆ ಮಾರಬೇಕು ತಾಯಿ ಅನ್ನುತ್ತಾರೆ.

ನೋಡು ತಾಯಿ ನಾಳೆ ದಿನ ತುತ್ತು ತಿಂದಪನು ನಮಗೆ ನಾಳೆ ಶತ್ರುವಾಗಿ ಬರುತ್ತಾನೆ. ಈ ರೀತಿಯಾಗಿ ನಾಳೆ ಏನೂ ತಿಳಿದಿದ್ದವಳಿಗೆ ನಾಳೆ ಪಟ್ಟಕಟ್ಟುತ್ತಾರೆ. ನಾಳೆ ಹಾದರಗಿತ್ತಿ ಗಂಡ ಗರತಿಗೆ ದೇಶಾಂತರ ಹೋಗುತ್ತಾನೆ ತಾಯಿ ಆದ್ದರಿಂದ ಮಗಳೇ ಈ ನರಲೋಕದಳಗೆ ನಾನು ಇರಲಾರೆ. ಅವ್ವಾ ಸತ್ಯವಂತ ದೇವರಂತ ನಾನೇನೆ ಹೇಳಲಾರೆ.

ನೋಡು ತಾಯಿ ನಾಳೆ ಈ ನರಲೋಕದಲ್ಲಿರುವ ಒಳಗೆ ಊರು ಊರಲ್ಲಿರುವ ದೇವರುಗಳಿಗೆ ದೀಪ ಧೂಪ ಇಲ್ಲವೆ ಕಂದಾ ಪೂಜೆ ಪುರಸ್ಕಾರ ಇಲ್ಲದೆ ಅವರು ಅಟ್ಟ ಸೇರಬೇಕು ಅವರು ಬಿಟ್ಟ ಸೇರಬೇಕು ಬಂದು ಗುಡ್ಡ ಸೇರಬೇಕು ದೊಡ್ಡಮ್ಮ ಅಂತ ಹೇಳುತ್ತಾರೆ. ಕೇಳವ್ವ ದೊಡ್ಡಮ್ಮ ಕೇಳವ್ವ ದೊಡ್ಡಮ್ಮ ನಾಳೆ ಅಯ್ಯೋ ದೇವರೆ ಗತಿ ಎಂದವರಿಗೆ ಬಾಯೆತ್ತಿ ಬೈಯುತ್ತಾರೆ ದೇವರಿಲ್ಲ ಎಂದವರಿಗೆ ಕೈಯೆತ್ತಿ ಮುಗಿಯುತ್ತಾರೆ ಅವ್ವಾ ದೇವಮಾನವರ ಮಠ ದೀಪ ಇಲ್ಲದ ಹಾಗೆ ಮಾಡುತ್ತಾರೆ ಇಂತಿಂತ ನರಮಾನವರು ಭೂಮಿ ಮೇಲೆ ಹುಟ್ಟುತ್ತಾರೆ. ತಾಯಿ ಹಾಗೆಯೆ ದೇವಸ್ಥಾನ ಯಾವ ರೀತಿ ಪಾಳಾಗಿ ಹೋಗುತ್ತಾರೆ ಅದೇ ರೀತಿ ಈ ಊರು ನಾಳೆ ಪಾಳಾಗಿ ಹೋಗುತ್ತದೆ. ನೋಡು ತಾಯಿ ನಾಳೆ ತಿರುಗಾಳಿ ತಿರಗಬೇಕು ಬಿರುಗಾಳಿ ಬೀಸಬೇಕು ನೋಡು ತಾಯಿ ನಾಳೆ ತಿರಗಬೇಕು ಬಿರುಗಾಳಿ ಬೀಸಬೇಕು ನೋಡು ತಾಯಿ ನಾಳೆ ಭೂಮಿಗೆ ಬೆಂಕಿ ಮಳೆ ಬೀಳುತ್ತದೆ, ತಾಯಿ ಈ ನಡುವೆ ನರಲೋಕದಲ್ಲಿ ಸುಟ್ಟ ಬುದಿಯಾಗಬೇಕು.

ಇದಲ್ಲದೆ ತಾಯಿ ನಾಳೆ ಹಂಪೆಯಲ್ಲಿರುವ ಕಲ್ಲಿನ ರಥ ನಾಳೆ ಕಂಚಿನ ರಥ ಆಗಬೇಕು ನಾಳೆ ಚಾಮುಂಡಿ ಬೆಟ್ಟದ ಮೇಲೆ ಇರುವಂತಹ ಕಲ್ಲು ಬಸವ ಜೀವದ ಬಸವ ಆಗಬೇಕು ನಾಳೆ ಉಕ್ಕಿನ ಕಡಲೆ ತಿಂದು, ನಾಳೆ ಉರುಗಡಲೆ ಮಾಡಬೇಕು. ಅಮ್ಮ ದೊಡ್ಡಮ್ಮ ನಾಳೆ ಆಕಾಶಕ್ಕೆ ಬಸವ ನನ್ನ ಕುಂದೂರು ಬೆಟ್ಟಕ್ಕೆ ಬರಬೇಕು ಅಮ್ಮ ತಾಯಿ ಪಟ್ಟಣದಲ್ಲಿ ಇರುವ ರಂಗಸ್ವಾಮಿ ಬಲದ ಮಗ್ಗುಲಲ್ಲಿ ಮೇಲಕ್ಕೆ ಎದ್ದು ತಲಕಾಡು–ಮಾಲಂಗಿಗೆ ಅದೇ ರಂಗಸ್ವಾಮಿ ಬರಬೇಕು. ಆಗ ಆ ರಂಗಸ್ವಾಮಿ ಬಂದು ಚಿನ್ನದ ಕೊಳಗ ತೆಗೆದುಕೊಂಡು ದಪ್ಪ ಮರಳು, ಸಣ್ಣ ಮರಳು ಏಳೇಳು ದೂರದವರೆಗೆ ಅಳೆಯಬೇಕು ತಾಯಿ, ನಾಳೆ ದಿನವೂ ದಪ್ಪ ಮರಳು ಬೇಳೆ ಆಗಬೇಕು ಅವ್ವ ತಾಯಿ ಕರಿಘಟ್ಟದಲ್ಲಿರುವ ಕಲ್ಲು ಕೋಳಿ ಕೂಗಬೇಕು ಅನ್ನುತ್ತಾರೆ.

ಅವ್ವಾ ತಾಯಿ ದೊಡ್ಡಮ್ಮ ಕಲ್ಲು ಕೋಳಿ ಮೊದಲು ಕೂಗಿದ ಮೇಲೆ ಕಂಚಿನ ರಥ ಗಲಿಗಲಿನೆ ಹರೀಬೇಕು, ಸೂರ್ಯ ಚಂದ್ರಾದಿಗಳು ತೆಂಕಲಿನಿಂದ ಬಡಗಲಾಗೆ ಕಾಲು ನಡಿಗೆಯೊಳಗೆ ಅವರು ಮಾತಾನಾಡಿಕೊಂಡು ನಡೆದುಕೊಂಡು ಬರಬೇಕು ಆಗ ಜೋಡಿ ಸೂರ್ಯ ಮೂಡುತ್ತಾರೆ. ಭೂಮಿ ತಳಕ ಹಾಕುತ್ತದೆ.

ಅವ್ವಾ ತಾಯಿ ನಾಳೆ ಈ ನಡುವೆ ನರಲೋಕವೆಲ್ಲ ಬರೀ ಲೋಕವಾಗಬೇಕು. ಅವ್ವಾ ನಾನು ಈ ಮರ್ತ್ಯ ಲೋಕಕ್ಕೆ ನಾ ಮರೆಯಾಗಿ ಹೋಗಬೇಕು, ಮರೆತು ನಿದ್ರೆ ಮಾಡಬೇಕು ಅನ್ನುತ್ತಾರೆ ನೋಡು ತಾಯಿ ನಾನು ಪಾತಾಳ ಲೋಕಕ್ಕೆ ಹೋದ ಮೇಲೆ ನನಗೆ ಅಲ್ಲಿ ಪಾದ ಪೂಜೆ ಆಗಬೇಕು, ನರಲೋಕದಲಿ ನರರ ಪೂಜೆ ನಡೆಯುಬೇಕು ದೊಡ್ಡಮ್ಮ ಎಂದು ಹೇಳಿ ನನಗೆ ಹಾರೆ ಮೂರು ಆಗಬೇಕು. ಎಲೆ ಗುದ್ದಲಿ ಮೂರಾಗಬೇಕು ಕೋಲು ಗುದ್ದಲಿ ಮೂರಾಗಬೇಕು ಆರು ಮೂರು ಒಂಬತ್ತು ನನಗೆ

ಕಬ್ಬಿಣ ಆಗಬೇಕು ಅವ್ವಾ ನನಗೆ ಕಬ್ಬಿಣ ತರುವಂತಹ ಮಗ ಎಲ್ಲಿದ್ದಾನೋ ಕಾಣೆ ಅಂತ ಹೇಳಿ ಧರೆಗೆ ದೊಡ್ಡವರು ಚಿಂತೆ ಮಾಡುತ್ತಾರೆ.

ಧರೆಗೆ ದೊಡ್ಡವರಿಗೆ ಪಾತಳ ಲೋಕಕ್ಕೆ ಹೋಗಬೇಕಾದರೆ ಅವರಿಗೆ ಹನ್ನೆರಡು ಆಳುದ್ದ ಪಾತಾಳವನ್ನ ತೆಗೆಯಲು ಕಬ್ಬಿಣ ಬೇಕಾಗುತ್ತದೆ. ಕಬ್ಬಿಣ ಇಲ್ಲದೆ ಈ ಕೆಲಸ ಆಗುವುದಿಲ್ಲ ಅದಕೋಸ್ಕರ ಅವರು ಕಬ್ಬಿಣ ಭಿಕ್ಷಕ್ಕೆ ಯಾರನ್ನ ಕಳುಹಿಸಲಿ ದೊಡ್ಡಮ್ಮ.

ರಾಚಪ್ಪಾಜಿಯವರಿಂದ ಕಬ್ಬಿಣದ ಭಿಕ್ಷೆ ತೆಗೆದುಕೊಂಡು ಬರುವುದಕ್ಕೆ ಆಗೋದಿಲ್ಲ ಚನ್ನಾಮ್ಮಾಜಿಯಿಂದ, ಮಡಿವಾಳ ಮಾಚಪ್ಪನಿಂದ, ಫಲಾರದಯ್ಯನಿಂದ ಕೂಡ ಕಬ್ಬಿಣದ ಭಿಕ್ಷೆ ತೆಗೆದುಕೊಂಡು ಬರಲು ಸಾಧ್ಯವಿಲ್ಲ ಆದರೆ ಯಾರನ್ನ ಕಬ್ಬಿಣದ ಭಿಕ್ಷೆ ತರಲು ಕಳುಹಿಸಬೇಕು ಅಂತಹೇಳಿ ಉರಿಗದ್ದಿಗೆ ಮೇಲೆ ಕುಳಿತುಕೊಂಡು ಬಹಳವಾಗಿ ಯೋಚನೆ ಮಾಡುತ್ತಿರುವಾಗ ಅವರಿಗೆ ಒಂದು ಯೋಚನೆ ಮನಸ್ಸಿಗೆ ಬರುತ್ತದೆ.

ಅದೇನೆಂದರೆ ಮಾರೇಹಳ್ಳಿಯ ಮುದ್ದಮ್ಮ ಬಸವಚಾರಿ ಮಗನಾದ ಕೆಂಪಚಾರಿಯನ್ನ ಕಾಳಿಂಗ ಗವಿಯಲ್ಲಿ ಕೂಡಿಬಿಟ್ಟಿದ್ದೇನೆ. ಅವನು ಅಲ್ಲಿ ಇದ್ದಾನೋ ಇಲ್ಲ ಸತ್ತು ಹೋಗಿದ್ದಾನೊ ಕಾಣನಲ್ಲ ಮಗಳೇ ಅವನನ್ನ ಹಾವು ತಿನ್ನುಕೊಂಡಿದ್ದೀಯಾ ಕಾಣನಲ್ಲ ಅಂತ ಹೇಳಿ. ಅವನನ್ನ ಹನ್ನೆರಡು ವರುಷದಿಂದ ಮರೆತು ಹೋದನಲ್ಲ ಅಂತಹೇಳಿ ಅವ್ವಾ ನಾನು ಪಡೆದ ಮಗನ ಏನು ಆದನೋ ಕಾಣೆ ಅಂತಹೇಳಿ ಕೊರೆ ಕಲ್ಲಿನ ಮೇಲೆ ನಿಂತುಕೊಂಡು ಮಗನ ಧ್ಯಾನ ಮಾಡಿಕೊಂಡು ಅವರು ಕುಂದೂರು ಬೆಟ್ಟಕ್ಕೆ ಓಡಿ–ಓಡಿ ಬರುತ್ತಾರೆ ಅಲ್ಲಿಗೆ ಬಂದು ಗುರುವು ಕಾಳಿಂಗನ ಗವಿಯನ್ನ ಕಣ್ಣಾರೆ ನೋಡುತ್ತಾರೆ. ಆಗ ಕೆಂಪಚಾರಿಗೆ ಧರೆಗೆ ದೊಡ್ಡವರು ಬಂದ ಅರಿವು ಆದಾಗ ಧರೆಗೆ ದೊಡ್ಡವರಿಗೆ ಈಗ ನಾನು ಬೇಡುವಂತ ಮಗನ ಕರಿಬೇಕು ಎಂದು ಹೇಳಿ ಕಂದಾ ಮಗನೆ ನಿನಗೆ ಈಗ ಸುಖವಾದ ಜೀವನ ಕೊಡುತ್ತೇನೆ ಅಂತಹೇಳಿ ಕೆಂಪಣ್ಣ ನಿನ್ನ ಮುಖವ ತೋರಪ್ಪ ಮಗನೆ ಎನ್ನುತ್ತಾರೆ. ಧರೆಗೆ ದೊಡ್ಡವರು ನಿಮ್ಮ ತಂದೆ–ತಾಯಿ ಕರೆದಿರುವ ಕೆಂಪಾಚಾರಿ ಎಂಬ ಹೆಸರು ಇಲ್ಲಿಗೆ ತೀರಿಹೋಗಲಿ ಈಗಲಾದರೂ ಕರೆಯುತ್ತೇನೆ ಬಾರಪ್ಪ ಅಂತಹೇಳಿ ಲೋ ಸಿದ್ದಪ್ಪಾಜಿ ಸಿದ್ದಪ್ಪಾಜಿ ಎಂದೂ ಕರೆಯುತ್ತಾರೆ. ಮೂರು ಸಾರಿ ಕರೆದ ಮೇಲೆ ಸಿದ್ದಪ್ಪಾಜಿ ದಡಬಡನೆ ಎದ್ದಾನಂತೆ ಆಗ ಕೆಂಪಣ್ಣನಿಗೆ ಸಿದ್ದಪ್ಪಾಜಿ ಎಂದು ಗಳಿಗೆಯಲ್ಲಿ ಕಣ್ಣಲ್ಲಿ ಕಣ್ಣೀರು ಜುಳು–ಜುಳನೆ ಬರುತ್ತದೆ. ಆಗ ಕೆಂಪಣ್ಣ ಮಂಟೇಸ್ವಾಮಿಯರ ಬಳಿಗೆ ಬರುವಾಗ ಕುಂದೂರು ಬೆಟ್ಟವೆಲ್ಲಾ ಗಡಗಡನೆ ನಡುಗಿ ಹೋಗುತ್ತದೆ. ಆ ದಿನದ ಮೇಲೆ ಇರುವಂತ ನನ್ನ ದೇವ ನಕ್ಷತ್ರಗಳು ಎಲ್ಲಾ ಕತ್ತರಿಸಿ ಕತ್ತಿರಸಿ ಭೂಮಿ ಮೇಲೆ ಬೀಳುತ್ತವೆ, ಆಗ ಸಿದ್ದಪ್ಪಾಜಿಯು ಕುಂದೂರು ಬೆಟ್ಟವನ್ನ ಇಳಿದು ರಾಜಬೊಪ್ಪೇಗೌಡನ ಪುರಕ್ಕೆ ಓಡಿ–ಓಡಿ ಬರುತ್ತಾನೆ.

ಸಿದ್ದಪ್ಪಾಜಿಯು ಬರುವಂತ ಸಮಯದಲ್ಲಿ ಧರೆಗೆ ದೊಡ್ಡವರು ಅರೆಗಣ್ಣು ಮುಚ್ಚಿಕೊಂಡು ಉರಿಗದ್ದಿಗೆ ಮೇಲೆ ಮಲಗಿರುತ್ತಾರೆ. ಆಗ ಸಿದ್ದಪ್ಪಾಜಿಯು ಮಲಗಿರುವ ಪರಂಜ್ಯೋತಿಯವರನ್ನ ನೋಡಿಕೊಂಡು ಈಗ ನಮ್ಮ ತಂದೆಯವರು ನಿದ್ರೆ ಮಾಡುತ್ತಿದ್ದಾರೆ ಈಗ ಮಾತಾನಾಡಿಸಿದರೆ ನಿದ್ರೆ ಭಂಗ ಉಂಟಾಗುತ್ತದೆ ಎಂದು ಹೇಳಿ ಪಾದವ ಜೋಡಿಸಿಕೊಂಡು ಕೈ ಎತ್ತಿ ಮುಗಿದು ಅವರ ಮಠದ ಮುಂದಗಡೆ ತೆಲಬಾಗಿ ನಿಂತಿಕೊಳ್ಳುತ್ತಾನೆ.

ಧರೆಗೆ ದೊಡ್ಡವರಿಗೆ ಎಚ್ಚರವಾಗಿ ಸಿದ್ದಪ್ಪಾಜಿ ಮಗನೇ ನಿನಗೆ ಜಯವಾಗಲಿ ಎದ್ದೇಳು ಎಂದು ಸಿದ್ದಪ್ಪಾಜಿಯವರ ಮುಂಗೈ ಹಿಡಿದು ಮೇಲಕ್ಕೆ ಎತ್ತುತ್ತಾರೆ.

ಧರೆಗೆ ದೊಡ್ಡವರು ಕೆಂಪಣ್ಣ ಈಗಲಾದರೂ ನನಗೆ ಮಗನಾಗುತ್ತಿಯಾ ನನಗೆ ಈಗಲಾದರೂ ದತ್ತ ಮಗನಾಗುತ್ತಿಯಾ ಎಂದು ಹೇಳಿದಾಗ ಕೆಂಪಣ್ಣ ಸ್ವಾಮಿ ನಿಮ್ಮನ್ನು ಬಿಟ್ಟು ನಾನು ಇನ್ನೆಲ್ಲಿಗೆ ಹೋಗಲಿ ಪ್ರಭುವೆ ಎನ್ನುತ್ತಾನೆ.

ಧರೆಗೆ ದೊಡ್ಡವರು ಕಂದಾ ನಿಮ್ಮ ತಂದೆಗೆ ನೀನು ಏನೂ ಆಹಾರ ತಂದಿದ್ದೀಯ ನನ್ನ ಮಗ ತಂದ ಆಹಾರ ಅಂತ ಅತೀ ಸಂತೋಷದೊಳಗೆ ಊಟ ಮಾಡುತ್ತಾನೆ. ಏನಾದರೂ ತಂದಿದ್ದೀಯ ಮಗನೆ ಎನ್ನುತ್ತಾರೆ.

ಸಿದ್ದಪ್ಪಾಜಿಯವರು ಈ ಭೂ ಲೋಕದಲ್ಲಿ ನಡುವೆ ನರಲೋಕದಲ್ಲಿ ಸಾಕಪ್ಪ ಗುರುದೇವ ನನಗೆ ಭಂಗಿಸೇವೆ ಆದರೆ ನಿನಗೆ ಫಲಾರ ಸೇವೆ ಮಾಡಿಸುತ್ತೇನೆ ಎಂದು ಹೇಳಿ ಧರೆಗೆ ದೊಡ್ಡವರಿಗೆ ಕೈ ಎತ್ತಿ ಮುಗಿಯುತ್ತಾನೆ.

ಧರೆಗೆ ದೊಡ್ಡವರು ಸಿದ್ದಪ್ಪಾಜಿಗೆ ಮಗನೇ ನಿನಗೆ ಹತ್ತೊಂಬತ್ತು ವರುಷ ಕಳೆದು ಹೋಯಿತು ಈಗ ನಿನಗೆ ಕಾಲು ಪ್ರಾಯ ಬಂದುಬಿಟ್ಟರೆ ನಿನಗೆ ಮದುವೆ ಮಾಡಿ ಸೊಸೆ ಮಾಡಿಕೊಳ್ಳುತ್ತೇನೆ ಎನ್ನುತ್ತಾರೆ.

ಸಿದ್ದಪ್ಪಾಜಿ ಸ್ವಾಮಿ ನನಗೆ ಮದುವೆ ಬೇಡ, ದೊರೆಯಾಗುವುದು ಬೇಡ, ರಾಜನಾಗುವುದು ಬೇಡ, ಈ ರಾಜ್ಯ ಬೇಡ ಹೆಂಡತಿ ಕಾಟ ಬೇಡ, ನನ್ನನ್ನು ನಿಮ್ಮ ಹಾಗೆ ಮಾಡಿಬಿಡಿ ಗುರುವೆ ಎನ್ನುತ್ತಾನೆ.

ಧರೆಗೆ ದೊಡ್ಡವರು ಎಲ್ಲಾ ಶಿಷ್ಯರನ್ನ ಕರೆದುಕೊಂಡು ಅವರು ತಲಕಾಡು–ಮಾಲಂಗಿಗೆ ಹೋಗುತ್ತಾರೆ. ಅಲ್ಲಿ ಅವನಿಗೆ ಮಾಯದ ಕತ್ತಿಯಲ್ಲಿ ಕೂದಲನ್ನ ಬೋಳಿಸಿ ಅವನ್ನ ಹರಿಯುವಂತಹ ನದಿಗೆ ಕರೆದುಕೊಂಡು ಸ್ನಾನ ಮಾಡಿಸಿ ಕೇಳುತ್ತಾರೆ. ಅದೇನೆಂದರೆ ಮಗನೇ ಇಲ್ಲಿಯ ವರೆಗೆ ಯಾರ ಮಗನಾಗಿದ್ದೀಯಾ ಮಗನೇ ಅಂತ ಕೇಳಿದಾಗ ತಂದೆ–ತಾಯಿಯರವು ಮಗನಾಗಿದೆ. ಇನ್ನು ಮುಂದೆ ನಿಮ್ಮ ಮಗನಾಗುತ್ತೇನೆ ಎಂದು ಹೇಳುತ್ತಾನೆ.

ಧರೆಗೆ ದೊಡ್ಡವರು ನಿಮ್ಮ ತಾಯಿ ಕಟ್ಟಿರುವ ಉಡುದಾರವನ್ನು ಕತ್ತುಹಾಕಿ ಬಿಡು ಎಂದು ಹೇಳಿ, ನಿಮ್ಮ ತಂದೆ ಹಾಕಿರುವ ಜನಿವಾರವನ್ನ ತೆಗದು ನೀರಿಗೆ ಬಿಡು ಅಪ್ಪ ನಿನ್ನ ತಂದೆ-ತಾಯಿ ಕೊಟ್ಟ ಹೆಸರು ಇಂದಿಗೆ ಹಾಳಾಗಿ ಹೋಗಲಿ ಎಂದು ಹೇಳುತ್ತಾರೆ ಆಗ ಕೆಂಪಣ್ಣ ತುಂಬಾ ದುಃಖದಿಂದ ತಂದೆ-ತಾಯಿಯವರನ್ನು ನೆನದು ಉಡುದಾರ ಜನಿವಾರವನ್ನ ನೀರಿಗೆ ಬಿಡುತ್ತಾನೆ.

ಕೆಂಪಣ್ಣನನ್ನ ಧರೆಗೆ ದೊಡ್ಡವರ ಬಳಿಗೆ ಕರೆದುಕೊಂಡು ಬರುತ್ತಾರೆ. ಆಗ ಅವನನ್ನ ನೋಡಿ ಧರೆಗೆ ದೊಡ್ಡವರು ಸಂತೋಷ ಪಡುತ್ತಾರೆ.

ಅವನಿಗೆ ಹುಲಿ ಚರ್ಮ ಉಡಿಸವರೆ ಉಲ್ಲೆ ಚರ್ಮವನ್ನ ಬೆನ್ನಿಗೆ ಕಟ್ಟುವರೆ, ಅಂಗೈನ ಮೇಲೆ ನಾಗಬೆತ್ತ ಮಡಗವರೆ, ಮುತ್ತಿನ ಜೋಳಿಗೆ ತೆಗೆದು ಮುಂಗೈಗೆ ಧರಿಸವರೆ, ಉತ್ತರದೇಶದ ಖಂಡಾಯವನ್ನ ಹೆಗಲ ಮೇಲೆ ಮಡಗಿದ್ದಾರೆ ಮುಳ್ಳಿನ ಪಾದರಕ್ಷೆಯನ್ನ ಹಾಕಿಸಿದ್ದಾರೆ. ಬಾರಿಸುವ ತಂಬೂರಿಯನ್ನ ಎದೆ ಮೇಲೆ ಧರಿಸಿದ್ದಾರೆ ಜಾಗಟೆಯನ್ನ ಮುಂಗೈಗೆ ಕೊಟ್ಟು ಇದು ನನ್ನ ಬಿರುದಲ್ಲ ಮಗನೇ ನಿನ್ನ ಬಿರುದು ಎಂದರಂತೆ. ಸಿದ್ದಪ್ಪಾಜಿಯು ಎಲ್ಲಾ ಬಿರುದುಗಳನ್ನ ಹೊತ್ತುಕೊಂಡು ರಾಜ ಬೊಪ್ಪೇಗೌಡನ ಪುರಕ್ಕೆ ಬರುತ್ತಾರೆ. ಆಗ ಬಂದು ಧರೆಗೆ ದೊಡ್ಡವರು ಮಗನೇ ನೀನು ಮೆರೆದುಕೊಂಡು ಬಹಳ ಸುಸ್ತಾಗಿ ಬಂದಿದ್ದೀಯಾ ಈ ಚಂದ್ರ ಶಾಲೆಯ ಒಳಗೆ ಹೋಗಿ ವಿಶ್ರಾಂತಿ ಪಡೆದುಕೊ ಮಗನೇ ಎಂದರಂತೆ.

ಸಿದ್ದಪ್ಪಾಜಿಯು ಚಂದ್ರ ಶಾಲೆಯ ಒಳಗಡೆ ವಿಶ್ರಾಂತಿ ಪಡೆಯಲು ಹೋದಾಗ ಈ ಕಡೆ ಧರೆಗೆ ದೊಡ್ಡವರು ಎಲ್ಲಾ ಶಿಷ್ಯರನ್ನ ಕರೆದು ನಾನು ಮರ್ತ್ಯ ಲೋಕಕ್ಕೆ ಹೋಗಬೇಕಾದರೆ ಒಂಬತ್ತು ಆಯುಧಗಳು ತರುವುದಕ್ಕೆ ಸಿದ್ದಪ್ಪಾಜಿಯನ್ನ ಅವರ ಜಾತಿಯವರ ಮನೆಗೆ ಕಳುಹಿಸಬೇಕು ಎಂದು ಹೇಳುತ್ತಾರೆ. ತನ್ನ ಶಿಷ್ಯಂದಿರಿಗೆ ಹೇಳುತ್ತಾರೆ.

ಧರೆಗೆ ದೊಡ್ಡವರು ನನ್ನ ಮಗನ ನಾನೇ ಕರೆಯಬೇಕು ಅಂತಹೇಳಿ ನೀಲಗಾರರ ಗಂಡು ನಿಜವುಳ್ಳ ಘನೀಲಿ, ನೀಲಿ ಸಿದ್ದಪ್ಪಾಜಿ ಬಾರಪ್ಪ ಎಂದು ಕರೆಯುತ್ತಿರುವಾಗ ಸಿದ್ದಪ್ಪಾಜಿ ಓಡಿ-ಓಡಿ ಬರುತ್ತಾರೆ. ಆಗ ಸಿದ್ದಪ್ಪಾಜಿ ಸ್ವಾಮಿ ನನ್ನ ಯಾವ ಕೆಲಸಕ್ಕಾಗಿ ಕೂಗಿದ್ರಿಯಪ್ಪ ನನ್ನ ಗುರುವೇ ಹೇಳಿ ಎನ್ನುತ್ತಾನೆ

ಧರೆಗೆ ದೊಡ್ಡವರು ಕಂದಾ ನಾನು ನಿನ್ನನ್ನ ಯಾಕೆ ಕರೆದೆ ಅಂದರೆ ಈ ಭೂಲೋಕದಲ್ಲಿ ಇದ್ದು ಸಾಕಾಗಿ ಹೋಗಿದೆ ಮಗನೆ, ಆದ್ದರಿಂದ ನೀನು ನನ್ನ ಬಿರುದುಗಳನ್ನು ತೆಗೆದುಕೊಂಡು ಯಾವುದಾದರೂ ಊರಿಗೆ ಹೋಗಿ ಬಾರಯ್ಯ ಎಂದಾಗ ಸಿದ್ದಪ್ಪಾಜಿ ಯಾವ ಊರಿಗೆ ಹೋಗಬೇಕು ಹೇಳು ಗುರುದೇವ ಎನ್ನುತ್ತಾನೆ. ಆಗ ಧರೆಗೆ ದೊಡ್ಡವರು ಮಗನೆ ಹಲಗೂರು ಏಳು ಬೀದಿ, ಚಿಲಕೂರು ಏಳು ಬೀದಿ

ಅಲ್ಲಿ ನಿನ್ನ ಜಾತಿಯವರು ತುಂಬ ಚೆನ್ನಾಗಿ ಬಾಳುವೆ ಮಾಡುತ್ತಿದ್ದಾರೆ ಅಲ್ಲಿಗೆ ಹೋಗಿ ಭಿಕ್ಷೆ ತೆಗೆದುಕೊಂಡು ಬಾ ಕಂದಾ ಎನ್ನುತ್ತಾರೆ.

ಸಿದ್ದಪ್ಪಾಜಿ ಧರೆಗೆ ದೊಡ್ಡವರು ಆಡಿದ ಮಾತನ್ನು ಕೇಳಿ ಬಹಳ ದುಃಖ ಪಡುತ್ತಾರೆ. ಏನೆ ದುಃಖ ಪಡುತ್ತಿದ್ದಾನೆ ಅಂದರೆ ಗುರುದೇವ ನಾನು ಸುತ್ತೇಳು ಗ್ರಾಮಕ್ಕೆ ಹೋಗಿ ಭಿಕ್ಷೆ ತರುತ್ತೇನೆ ಆದರೆ ಹಲಗೂರಿಗೆ ಹೋಗಿ ನಾನು ಭಿಕ್ಷೆ ತರಲಾರೆ ಗುರುದೇವ ಎನ್ನುತ್ತಾನೆ.

ಆಗ ಧರೆಗೆ ದೊಡ್ಡವರು ಮಗನೆ ನೀನು ಅಲ್ಲಿಗೆ ಹೋಗಿ ಭಿಕ್ಷೆ ತರಲಿಲ್ಲ ಅಂದರೆ ನರ ಲೋಕದಲ್ಲಿ ನೀನು ದೇವರು ಅಗೋದಿಲ್ಲ ಕಂದಾ ಎಂದು ಹೇಳುತ್ತಾರೆ.

ಧರೆಗೆ ದೊಡ್ಡವರು ಬಹಳ ಸಿಟ್ಟಾಗಿ ಸಿದ್ದಾಪಾಜಿ ನೀನು ಹಲಗೂರಿಗೆ ಭಿಕ್ಷೆ ತರಲು ಹೋಗದೆ ಹೋದರೆ ನಾನು ನಿನಗೆ ಗುರುವಲ್ಲ ನೀನು ನನಗೆ ಶಿಷ್ಯನಲ್ಲ ನಾನು ಕಟ್ಟಿದ ಮಣಿಯ ಕಳೆದು ಇಟ್ಟು, ಜೋಳಿಗೆ ಕೊಟ್ಟು ಎಲ್ಲಾದರೂ ಹೋಗಿ ನಿನ್ನ ಜಾತಿಯವರ ಸೇರಿಕೊ ಕಂದ ಎಂದು ಸಿಟ್ಟಾಗಿ ಹೇಳುವಾಗ ಮಗನೆ ನೀನು ಹಲಗೂರಿಗೆ ಹೋಗಿ ಚಿನ್ನ ಕೇಳಬೇಡ, ಬೆಳ್ಳಿ ಕೇಳಬೇಡ, ರತ್ನ ಕೇಳಬೇಡ ಅಕ್ಕಿ–ಬೇಳೆ ಕೊಟ್ಟರೆ ನಿನ್ನ ಜೋಳಿಗೆ ಒಡ್ಡಬೇಡ ಅವರ ಹಣ ಅಸೆಗೆ ಅಂಗೈಯನ್ನ ಒಡ್ಡಲೂ ಬೇಡ ಆದರೆ ನನಗೆ ಹಾರೆ ಮೂರು, ಎಲೆ ಗುದ್ದಲಿ, ಮೂರು ಬಾಂಡಲಿ ಮೂರು ನನಗೆ, ಆರು ಮೂರು ಒಂಬತ್ತು ಕಬ್ಬಿಣ ಆಗಬೇಕು ಕಂದಾ ಆದ್ದರಿಂದ ನೀನು ಹಲಗೂರಿಗೆ ಹೋಗಿ ಏಳು ದುಡ್ಡೀನ ಕಬ್ಬಿಣ ಭಿಕ್ಷೆ ಪಡೆದು ಬಾರೊ ಅಂದರಂತೆ.

ಧರೆಗೆ ದೊಡ್ಡವರು ಸಿದ್ದಪ್ಪಾಜಿಗೆ ನಿನಗೆ ಹಲಗೂರಿನಲ್ಲಿ ಅವರು ನಿನಗೆ ಕಬ್ಬಿಣದ ಭಿಕ್ಷೆ ಕೊಡಲಿಲ್ಲ ಅಂದ ಪಕ್ಷದಲ್ಲಿ ಅವರಿಗೆ ಕೊಡಬಾರದ ಕಷ್ಟಕೊಡುತ್ತೇನೆ. ಅಲ್ಲಿ ಹೆಣದ ರಾಶಿಗಳನ್ನ ಮಾಡುತ್ತೇನೆ ಅವರ ಏಳನೂರು ಒಕ್ಕಲ ಏಳು ಒಕ್ಕಲ ಮಾಡುತ್ತೇನೆ ನೀನು ಹೋಗಿ ಪಾಂಚಾಳಗೇರಿಗೆ ಅವರನ್ನ ಬಗ್ಗಿಸಿ ಬಾರೋ ಎಂದಾಗ ಧರೆಗೆ ದೊಡ್ಡವರ ಮಾತು ಕೇಳಿ ಸಿದ್ದಪ್ಪಾಜಿ ಬಹಳ ದುಃಖ ಪಡುತ್ತಾನೆ.

ಸಿದ್ದಪ್ಪಾಜಿಯವರು ಬಹಳ ದುಃಖದಿಂದ ಗಳಗಳನೆ ಅಳುತ್ತಾ ಆಗಲಿ ಗುರುವೇ ನಾನು ಬದುಕಿ ಬಂದರೆ ಬೊಪ್ಪೇಗೌಡನ ಪುರಕ್ಕೆ ಬರುತ್ತೇನೆ. ನಾನು ಸತ್ತು ಹೋದರೆ ಹಲಗೂರಿನಲ್ಲಿ ಸಾಯುತ್ತೇನೆ ಅಂತ ಹೇಳಿ ಸಿದ್ದಪ್ಪಾಜಿ ಮುಟ್ಟನಹಳ್ಳಿ ತೋಪಿಗೆ ನಾನು ಹೋಗಬೇಕು ಅಂತ ಹೇಳಿ ಓಡಿ–ಓಡಿ ಬರುತ್ತಾರೆ.

ಅಲ್ಲಿಗೆ ಬಂದು ದೊಡ್ಡಮ್ಮ ತಾಯಿಯ ಮುಂದೆ ಅಳುತ್ತಿರುವಾಗ ದೊಡ್ಡಮ್ಮ ತಾಯಿ ಹೊಂಬಾಳೆ ಒಳಗೆ ಮಾತನಾಡುತ್ತಿದ್ದಾಳೆ ಏನೆಂದರೆ ಯಾರೊ ಸಿದ್ದಪ್ಪಾಜಿ ಇಷ್ಟೊಂದು ಸಂಕಟ ಪಡುತ್ತಿದ್ದಿಯಾ ನಿನ್ನ ಕಣ್ಣಲ್ಲಿ ಕಣ್ಣೀರು ಇನ್ನು ತಪ್ಪಲಿಲ್ಲವೆ ಎಂದು ಕೇಳುತ್ತಾಳೆ.

ಸಿದ್ದಪ್ಪಾಜಿ ಹಲಗೂರಿಗೆ ಹೋಗುವ ವಿಷಯವನ್ನೆಲ್ಲ ಹೇಳಿ ನೀನಾದರೂ ಹೋಗಿ ಗುರುಗಳಿಗೆ ಹೇಳಿ ನನ್ನ ಪ್ರಾಣ ಉಳಿಸು ತಾಯಿ ಅನ್ನುತ್ತಾರೆ. ಮಗನೆ ನಮಗೂ ನಿನಗೂ ಈ ಭೂಮಿಗೆ ಅವರೇ ಧರೆಗೆ ದೊಡ್ಡವರು ಅವರ ಮಾತನ್ನ ಮೀರಲು ಸಾಧ್ಯವೇ ಕಂದಾ ನೀನು ಹೋಗು ಹಲಗೂರಿಗೆ ಅವರೆ ಬಂದು ನಿನ್ನ ಪಾದದ ಮುಂದೆ ಒಂಬತ್ತು ಪವಾಡ ತಂದು ಮಡಗುತ್ತಾರೆ ಕಂದಾ ನೀನು ಮುಂದೆ ಹೋಗು ನಾವು ಎಲ್ಲರು ನಿನ್ನ ಭಾರಿ ಬಿರಿದನೊಳಗೆ ನಾವು ಮಾಯದ ರೂಪದಲ್ಲಿ ಬರುತ್ತೇವೆ ಎಂದು ದೊಡ್ಡಮ್ಮ ತಾಯಿ ಹೇಳಿ ತಾಯಿ ನಾನೇನಾದರು ಸತ್ತು ಹೋದರೆ ನಿನ್ನ ಗೋರಿಯ ಪಕ್ಕದಲ್ಲಿ ನನ್ನ ಗೋರಿಯನ್ನ ಮಾಡಿಸಿಬಿಡು ತಾಯಿ ಅಂತ ಹೇಳಿ ಸಿದ್ದಪ್ಪಾಜಿ ರಾಜಬೊಪ್ಪೇಗೌಡನ ಪಾದಕೆ ಕೈ ಎತ್ತಿ ಮುಗಿದು ಅವರು ಕುಂದೂರು ಬೆಟ್ಟಕ್ಕೆ ಬರುತ್ತಾರೆ. ಅಲ್ಲಿಗೆ ಬಂದು ಎಂಟು ದಿಕ್ಕುಗಳನ್ನ ನೋಡಿದರು ಹಲಗೂರು ಕಾಣಲಿಲ್ಲ ಆದರೆ ಹಲಗೂರಿನಲ್ಲಿ ಏಳನೂರು ದೊಡ್ಡ ಕುಲುಮೆಗಳಿಂದ ಬರುವ ಬೆಂಕಿ ಹೊಗೆ ಮಾತ್ರ ಆ ಕಾಶದ ಎತ್ತರಕ್ಕೆ ಹೋಗುತ್ತಿದೆಯಂತೆ ಅದನ್ನ ನೋಡಿ ಇದೇ ಹಲಗೂರು ಅಂತ ಹೇಳಿ ಬಹಳ ಭಯಪಟ್ಟಿಕೊಂಡು ಬಹಳ ಚಿಂತೆ ಮಾಡುತ್ತಿರುವಾಗ ಪಕ್ಕದಲ್ಲಿದ್ದ ಕಕ್ಕೆ ಮರದ ಅಡಿಯಲ್ಲಿ ಮೂರು ನಾಮದ ದಾಸಯ್ಯ ಮುತ್ತತ್ತಿರಾಯ ಒದ್ದಾಡುತ್ತಿರುತ್ತಾನೆ. ಅದನ್ನ ನೋಡಿ ಸಿದ್ದಪ್ಪಾಜಿ ದಾಸಯ್ಯನನ್ನು ಈ ಕಕ್ಕೆ ಮರ ಬಿಟ್ಟು ಎದ್ದು ಬಾ ಎಂದರಂತೆ ಆಗ ಸಿದ್ದಪ್ಪಾಜಿಯು, ಮೂರು ನಾಮದ ದಾಸಯ್ಯನನ್ನ ಕೇಳಿದಾಗ ಅಯ್ಯಾ ಸಿದ್ದಪ್ಪಾಜಿ ನಾನು ಹಲಗೂರಿಗೆ ಭಿಕ್ಷೆ ಬೇಡಲು ಹೋದಾಗ ಅಲ್ಲಿದ್ದ ಪಾಂಚಾಳದವರು ನನಗೆ ಕಾದಿರುವ ಕಬ್ಬಿಣವನ್ನ ತಂದು ಬರೆ ಎಳೆದರಪ್ಪ ಎನ್ನುತ್ತಾನೆ.

ಸಿದ್ದಪ್ಪಾಜಿ ನಾನು ಅಲ್ಲಿಂದ ಓಡಿ–ಓಡಿ ಬಂದು ಇಲ್ಲಿ ಕುಳಿತುಕೊಂಡಿದ್ದೇನೆ ಸಿದ್ದಪ್ಪಾಜಿ ಎಂದು ಹೇಳುತ್ತಾನೆ. ಆಗ ಸಿದ್ದಪ್ಪಾಜಿ ದೊಡ್ಡವರ ಪಾದ ನೆನೆದು ಜೋಳಿಗೆ ಒಳಗೆ ಇದ್ದಂತಹ ಆರು ಕಟ್ಟು ಭಂಗಿ, ಆರು ಕಟ್ಟು ಹೊಗೆ ಸೊಪ್ಪು ಇಪ್ಪತ್ತ ನಾಲ್ಕು ಖಂಡುಗ ಭಂಗಿ ಸೊಪ್ಪನ್ನು ನೀಡಿ ಅವರು ಕೈ ಎತ್ತಿ ಮುಗಿಯುತ್ತಾರೆ ಕೈ ಎತ್ತಿ ಮುಗಿದು ಅದನ್ನ ಅಂಗ್ಯೆಗೆ ಹಾಕಿ ತೀಡಿ ಗಾಂಜ ಮಾಡಿ ಅದನ್ನ ಬಂಗಾರದ ಚಿಲುಮೆಗೆ ಜಡಿದು ತುಂಬಿ ಬೆಂಕಿ ತೆಗೆದು ಲೇ ದಾಸಪ್ಪ ಎಂದು ಕರೆದು ಅದನ್ನ ಅವನಿಗೆ ಕೊಟ್ಟು ಇದನ್ನ ಸೇದು ಎಂದು ಕೊಟ್ಟರಂತೆ. ದಾಸಯ್ಯ ಬಂದು ದಮ್ಮು ಸೇದಿದರಂತೆ ಬುಕ ಬುಕನೆ ಕೆಂಬುತ್ತಾರೆ. ಆಗ ಎಲ್ಲರ ಪಾದವನ್ನ ನೆನೆದು ಸಿದ್ದಪ್ಪಾಜಿ ಅವರು ಸಹ ದಮ್ಮು ಹೊಡೆಯುತ್ತಾರೆ. ಅವರು ಭಂಗಿ ಹೊಡೆದ ಗ್ಯಾನದಲ್ಲಿ ಹಲಗೂರನ್ನ ನೋಡುತ್ತಾರೆ ಆಗ ನೋಡಿದಾಗ ಹಲಗೂರು ಹದಿನಾಲ್ಕು ಬೀದಿ ತಳ ತಳನೆ ಹೊಳೆದವಂತೆ. ಆಗ ಸಿದ್ದಪ್ಪಾಜಿ ಹಲಗೂರಿಗೆ ನಾನು ಬಳೆಗಾರನಾಗಿ ಹೋಗಬೇಕು ಅಂತ ಹೇಳಿ ಅವರು ವಿವಿಧ ಹಾವುಗಳನ್ನ ತೆಗೆದುಕೊಂಡು ವಿವಿಧ ಬಳೆಗಳನ್ನ ಮಾಡುತ್ತಾರೆ. ಈಗ ಆ ಬಳೆಗಳನ್ನು ಮಾರಲು ಹಲಗೂರಿಗೆ ಹೋಗಬೇಕು ಅಂತ ಹೇಳಿ ಅವನು ಹಲಗೂರಿಗೆ ಬಳೆಗಾರನ ವೇಷದಲ್ಲಿ ಬರುತ್ತಾನೆ. ಆಗ ಬರುವಾಗ ಹಲಗೂರಿನ ಒಳಗೆ ಮಾರಿ ಅವನ್ನನ್ನು ತಿನ್ನಲು ಬಂದಾಗ ಅವಳನ್ನ ಹೊಡೆದು

ಅವಳಿಗೆ ಬುದ್ಧಿ ಕಲಿಸಿ ಮುಂದೆ ಏಳು ಜನ ದೊರೆಗಳ ಬೀದಿ ಒಳಗೆ ಬಳೆ-ಬಳೆ ಎಂದು ಮೂರು ಸಲ ಸಾರುತ್ತಾನೆ. ಸಿದ್ದಪ್ಪಾಜಿ ಬಳೆ-ಬಳೆ ಎಂದು ಸಾರಿಕೊಂಡು ಸಿದ್ದಪ್ಪಾಜಿಯವರನ್ನ ನೋಡುತ್ತಾರೆ. ರಾಣಿಯರಿಗೆ ಬಳೆಯ ಮೇಲೆ ಬಹಳ ಆಸೆಯಾಗಿ ಸಿದ್ದಪ್ಪಾಜಿಯನ್ನ ಕರೆಯುತ್ತಾರೆ ಆಗ ಸಿದ್ದಪ್ಪಾಜಿಯ ಧರೆಗೆ ದೊಡ್ಡವರ ಪಾದ ನೆನೆದು ಅವರ ಮನೆಗೆ ಹೋದಾಗ ರಾಣಿಯರು ನಿನ್ನ ಬಳೆಯ ತೋರಿಸು ನೋಡಬೇಕು ಎನ್ನುತ್ತಾರೆ ಸಿದ್ದಪ್ಪಾಜಿಯನ್ನ ನನ್ನ ರಾಣಿಯರ ಕೈಗೆ ಬಳೆಯನ್ನ ತೊಡಿಸಯ್ಯ ಎಂದಾಗ ಸಿದ್ದಪ್ಪಾಜಿ ನಿಮ್ಮ ಕೈಯಲ್ಲಿರುವ ಮುತ್ತು ರತ್ನದಲ್ಲಿರುವ ಬಳೆಗಳನ್ನ ತೆಗೆದು ಹಾಕಿದ ಮೇಲೆ ನಾನು ನಿಮ್ಮ ಕೈಗೆ ಬಳೆ ತೊಡಿಸುತ್ತೇನೆ. ಅಂದಾಗ ರಾಣಿಯರು ಅವರ ಕೈಯಲ್ಲಿದ್ದ ಮುತ್ತು ರತ್ನದ ಬಳೆಗಳನ್ನ ತೆಗೆದು ಮೊರಕ್ಕೆ ಹಾಕಿ ಮಡಗುತ್ತಾರೆ ಸಿದ್ದಪ್ಪಾಜಿಯು ಧರೆಗೆ ದೊಡ್ಡವರ ಪಾದ ನೆನೆದು ಏಳು ಜನ ರಾಣಿಯರ ಕೈಗೆ ವಿವಿಧ ಬಳೆಗಳನ್ನು ತೊಡುತ್ತಾನೆ ಆಗ ರಾಣಿಯರು ಅಯ್ಯಾ ಬಳೆಗಾರ ಎಷ್ಟು ದುಡ್ಡು ಆಯ್ತು ಕೊಡುತ್ತೇವೆ ಎಂದು ಕೇಳಿದಾಗ ಸಿದ್ದಪ್ಪಾಜಿ ನನಗೆ ಹಣ ಕಾಸು ಬೇಡ ಅಷ್ಟುವೇ ಕೊಡಬೇಕೆನಿಸಿದರೆ ನನಗೆ ಕಬ್ಬಿಣವನ್ನು ಕೊಡ್ರಕ್ಕ ಎಂದು ಹೇಳುತ್ತಾನೆ. ರಾಣಿಯವರಿಗೆ ಈ ಮಾತನ್ನ ಕೇಳಿ ಬಳೆಗಾರ ಹಣ ಕೊಡುತ್ತೇವೆ ಹೊರತು ಭಿಕ್ಷೆ ಕೊಡುವುದಿಲ್ಲ ಎಂದರಂತೆ ಆಗ ಸಿದ್ದಪ್ಪಾಜಿಯನ್ನ ಹೊರಗೆ ಹಾಕಿದಾಗ ಸಿದ್ದಪ್ಪಾಜಿಯು ಜೋಳಿಗೆ ಒಳಗೆ ಇದ್ದ ವಿಭೂತಿಯನ್ನ ತೆಗೆದು ಅವರಿಗೆ ಉರುಬುತ್ತಾರೆ. ಆಗ ಬಂದು ಅರಳಿ ಕಟ್ಟೆ ಮೇಲೆ ಬಂದು ಕುಳಿತುಕೊಳ್ಳುತ್ತಾರೆ. ಆಗ ವಿಭೂತಿ ಉರುಬಿದ ತಕ್ಷಣ ರಾಣಿಯರ ಕೈಯಲ್ಲಿ ಬಳೆಗಳು ಹಾವು-ಚೇಳಾಗಿ ಅವರ ಮೈಮೇಲೆ ಹರಿದಾಡುತ್ತವೆ ಆಗ ಅವರು ಏಳು ಜನ ರಾಣಿಯರು ಅವರ ಗಂಡಂದಿರ ಹತ್ತಿ ಓಡೋಡಿ ಬಂದು ಎಲ್ಲ ವಿಷಯವನ್ನು ತಿಳಿಸುತ್ತಾರೆ.

ರಾಜರು ಅವರ ಆಳುಗಳನ್ನು ಕರೆದು ಅವನು ಎಲ್ಲಿದ್ದರು ಬಿಡಬೇಡಿ ಅವನನ್ನು ಎಳೆದು ಕಡಿದು ಕೊಂದು ಬನ್ನಿ ಎನ್ನುತ್ತಾರೆ. ಆ ರೀತಿ ಹೇಳಿದ ತಕ್ಷಣ ಆಳುಗಳು ಅವನನ್ನು ಹುಡುಕಿಕೊಂಡು ಓಡೋಡಿ ಊರಿನ ಎಲ್ಲ ಬೀದಿಗಳನ್ನ ನೋಡಿಕೊಂಡು ಬರುವಾಗ ಅವನನ್ನ ಅರಳಿ ಮರದ ಕಟ್ಟೆ ಜಗಲಿಯ ಮೇಲೆ ಕಣ್ಣಿಂದ ನೋಡುತ್ತಾರೆ ಆಗ ಸಿದ್ದಪ್ಪಾಜಿಯ ಹತ್ತಿರ ಹೋಗಿ ನಮ್ಮ ದೊರೆಗಳು ಕರೆಯುತ್ತಾರೆ ಬಾ ಎಂದಾಗ ಹೇಳಿದಾಗ ಅಣ್ಣ ನೀವು ನನ್ನ ಕೈ ಮುಟ್ಟಬೇಡಿ ನಾನೇ ಬರುತ್ತೇನೆ ಎಂದರಂತೆ. ಆಗ ಸಿದ್ದಪ್ಪಾಜಿಯು ದೊರೆಗಳ ಬಳಿಗೆ ಬರುವಾಗ ಅವನನ್ನ ನೋಡಿ ಬಹಳ ಕೋಪ ಮಾಡಿಕೊಳ್ಳುತ್ತಾರೆ. ಆಗ ದೊರೆಗಳು ಏನೋ ಬಳೆಗಾರ ನನ್ನ ಮಡದಿಯ ಕೈಗೆ ಬಳೆಗಳನ್ನ ಕೊಟ್ಟು ಉಡು ಗಬ್ಬಿಣ ಕೇಳುತ್ತೀಯಾ ನೀನು ಕಬ್ಬಿಣ ಕೇಳಿದ ಮೇಲೆ ನನ್ನ ಮಡದಿಯರ ಕೇಳಿದ ಹಾಗೆ ಆಯಿತು ಎನ್ನುತ್ತಾರೆ. ಆಗ ಎಲೇ ಆಳುಗಳೇ ಇವನನ್ನ ಈ ಊರಿನಿಂದ ಯಾವ ಕಡೆಗೂ ಬಿಡಬೇಡಿ ಇವನ ಗುರುವಿನ ಮತ್ತುಇವನ ಸತ್ಯವ ನೋಡಬೇಕು ಅಂದರಂತೆ.

ರಾಜರುಗಳು ನೀನು ಒಳ್ಳೆ ಬಳೆಗಾರ ಆದರೆ ನಾವುಹೇಳಿದ ಸತ್ಯವನ್ನ ನೀವು ಮಾಡಬೇಕು ಅಂದಾಗ ಸಿದ್ದಪ್ಪಾಜಿ ನಾನು ಯಾವ ಪ್ರಮಾಣ ಮಾಡಬೇಕು ನೀವು ಹೇಳಿದ ಸತ್ಯವನ್ನ ನಾನು ಮಾಡುತ್ತೇನೆ ಎಂದರಂತೆ. ಆಗ ದೊರೆಗಳು ಸಿದ್ದಪ್ಪಾಜಿಯನ್ನ ನಾಲ್ಕು ಜನ, ನಾಲ್ಕು ದಿಕ್ಕಿನಲಿ ನಿಂತುಕೊಂಡು ಇಕ್ಕಳದಲ್ಲಿ ಹಿಡಿದುಕೊಂಡು ಅವರಿಗೆ ರಬ್ಬರಬ್ಬನೆ ಹೊಡೆಯುತ್ತಾರೆ. ಆಗ ಸಿದ್ದಪ್ಪಾಜಿ ಗುರುವಿನ ಧ್ಯಾನವನ್ನ ಮಾಡಿಕೊಂಡು ಕುಳಿತ್ತಿದ್ದಾರೆ. ಆಗ ಮಂಟೇದಸ್ವಾಮಿ ಸಿದ್ದಪ್ಪಾಜಿಯನ್ನ ಕರೆದುಕೊಂಡು ಬಂದು ನಿನಗೆ ಕಬ್ಬಿಣದ ಭಿಕ್ಷೆ ಬೇಕಾದರೆ ನೀನು ಈ ಕಾದಿರುವ ಕಬ್ಬಿಣದಿಂದ ಬರೆಯನ್ನು ಎಳೆಸಿಕೊ ಅಂದಾಗ ಸಿದ್ದಪ್ಪಾಜಿ ಆಗ ಧರೆಗೆ ದೊಡ್ಡವರ ಪಾದ ನೆನೆದು ಕೈ ಎತ್ತಿ ಮುಗಿಯುತ್ತಾರೆ. ಧರೆಗೆ ದೊಡ್ಡವರ ಒಂದು ಮಂತ್ರದಿಂದ ಅವರಿಗೆ ಬರೆ ಹಾಕಿದ ಜಾಗವೆಲ್ಲ ಜನುವಾರ ಆಗುತ್ತವೆ.

ಸಿದ್ದಪ್ಪಾಜಿ ನೀವು ಹೇಳಿದ ಹಾಗೆ ಮಾಡಿದ್ದೇನೆ. ನಮಗೆ ಕಬ್ಬಿಣದ ಭಿಕ್ಷೆ ಕೊಡಿ ಎಂದು ಕೇಳುತ್ತಾನೆ.

ಆಗ ರಾಜರು ಆಗಲಿ ಸಿದ್ದಪ್ಪಾಜಿ ನೀನು ಇನ್ನೊಂದು ಪವಾಡ ಮಾಡಿದರೆ ನಿನಗೆ ನಾವು ಕಬ್ಬಿಣ ಭಿಕ್ಷೆ ಕೊಡುತ್ತೇವೆ ಅದೇನೆಂದರೆ ನೀನು ಮೂರು ಸಾರಿ ಈ ಕಾದ ಕಬ್ಬಿಣ ಕೊಪ್ಪರಿಕೆ ಒಳಗಡೆ ಮುಳುಗಿ ಮುಳುಗಿ ಏಳಬೇಕು ಅಂದರಂತೆ ಆಗ ಅದೇ ರೀತಿ ಮಾಡಿದಾಗ ಸಿದ್ದಪ್ಪಾಜಿ ಧರೆಗೆ ದೊಡ್ಡವರನ್ನ ನೆನೆದ ತಕ್ಷಣ ಕಬ್ಬಿಣದ ಕಾದ ಗಟ್ಟಿ ಆವಿ ನೀರಾಗಿ ಹರಿಯುತ್ತದೆ.

ರಾಜರಿಗೆ ತುಂಬಾ ಕೋಪ ಬಂದು ನಾವು ಏನೇ ಶಿಕ್ಷೆ ಕೊಟ್ಟರೂ ಬಹಳ ಭಕ್ತಿಯಿಂದ ಮಾಡುತ್ತಿದ್ದಾನೆ ಅಂತ ಹೇಳಿ ಇವನನ್ನ ಕರೆದುಕೊಂಡು ಹೋಗಿ ಕಾಳಿದೇವಿ ಮಠಕ್ಕೆ ಕೂಡು ಬಿಡಬೇಕು ಅಂದರಂತೆ ಅದೇ ರೀತಿ ಅವನನ್ನ ಕರೆದುಕೊಂಡು ಹೋಗಿ ಕಾಳಿಕಾದೇವಿಯ ಮಠಕ್ಕೆ ಕೂಡಿಹಾಕುತ್ತಾರೆ. ಆಗ ಅಲ್ಲಿದ್ದ ಮಾರಿಯು ಇವನನ್ನ ಹೊರಗೆ ಹಾಕಲು ಪ್ರಯತ್ನಿಸುತ್ತಾಳೆ. ಆದರೆ ಸಿದ್ದಪ್ಪಾಜಿಯು ಇವಳನ್ನು ಒದ್ದು ಹೊರಗೆ ಹಾಕುತ್ತಾನೆ. ಆ ಮನೆಯಲ್ಲಿ ಸುಖವಾಗಿ ನಿದ್ರೆ ಮಾಡುತ್ತಾನೆ.

ರಾಜರು ಇವನ ಮಹಿಮೆಯನ್ನ ನೋಡಿ ಇವನು ಬಹಳ ಮಾಯಿಕಾರ ಇವನನ್ನ ಇದೇ ರೀತಿ ಬಿಡಬಾರದು ಇವನನ್ನು ಕಾದ ಎಣ್ಣೆಯ ಕೊಪ್ಪರಿಕೆಯ ಒಳಗೆ ಮೂರು ಸಲ ಮುಳುಗಿಸಿ ಆಗ ಅವನು ತಾನೇ ಹೊರಗೆ ಬರಬೇಕು. ಆಗ ನಿನ್ನ ಗುರುವ ಸತ್ಯ ನೋಡುತ್ತೇನೆ ನಿನ್ನ ಸತ್ಯವನ್ನ ನೋಡುತ್ತೇವೆ ಎಂದರಂತೆ. ಆಗ ಸಿದ್ದಪ್ಪಾಜಿಯು ಧರೆಗೆ ದೊಡ್ಡವರ ಪಾದ ನೆನೆದು ಎಣ್ಣೆ ಕೊಪ್ಪರಿಕೆ ಒಳಗಡೆ ಕುಳಿತುಕೊಂಡರಂತೆ. ಆಗ ಕುಳಿತುಕೊಂಡ ಮೇಲೆ ಕಾದಿರುವ ಎಣ್ಣೆಯು ತಣ್ಣೀರು ಆಗುತ್ತಾರೆ.

ರಾಜರು ಇನ್ನೊಂದು ಸತ್ಯವನ್ನು ಮಾಡುತ್ತೇವೆ ಅದೇನೆಂದರೆ ಒಂದು ನೊಗದ ಗಾತ್ರದ ಕೂದಲನ್ನ ಕಾಯಿಸಿ ನಿನ್ನ ಹೆಗಲ ಮೇಲೆ ಮಡಗುತ್ತೇವೆ ಅದನ್ನ ಹೊತ್ತುಕೊಂಡು ನಿಂತವನೆ ಆಗ ಅವನು ಹೊತ್ತು ಕೊಂಡು ನಿಂತಿದ್ದ ನೊಗದ ಗಾತ್ರದ ಕಬ್ಬಿಣವು ಖಂಡಾಯವಾಗುತ್ತದೆ. ಹಲಗೂರಿನ ಏಳು ಜನ ರಾಜರು ತುಂಬಾ ಸಿಟ್ಟುಗೊಂಡು ಹೇಳುತ್ತೀನಿ ಕೇಳು ಜಂಗಮ ನೀನು ಈ ಸುಣ್ಣದ ಬಾವಿಗೆ ಹೋಗಿ ನೀನು ಅಲ್ಲಿ ಒಂದು ದಿವಸ ಇದ್ದು ಬರಬೇಕು. ಆಗ ನೀನು ಎದ್ದು ಮೇಲಕ್ಕೆ ಬಂದರೆ ನೀವು ಬೇಡಿದ ಕಬ್ಬಿಣದ ಭಿಕ್ಷೆಯನ್ನು ಕೊಡುತ್ತೇವೆ ಎಂದರಂತೆ ಆಗ ಸಿದ್ದಪ್ಪಾಜಿಯವರು ಮಂಟೇದಲಿಂಗಯ್ಯನ ಧ್ಯಾನ ಮಾಡಿಕೊಡಿಕೊಂಡು ರಾಜ ಬೊಪ್ಪೇಗೌಡನ ಪುರಕ್ಕೆ ಕೈ ಎತ್ತಿ ಮುಗಿದು ಅವರು ಬಾವಿಯೊಳಕ್ಕೆ ಬಲದ ಪಾದ ಇಡುತ್ತಾರೆ. ಆಗ ಧರೆಗೆ ದೊಡ್ಡವರಿಗೆ ಅರಿವಾಗಿ ಕಪ್ಪು ದೂಳ್ತ ತೆಗೆದು ಬಾವಿಗೆ ಉರುಬವರೆ ಆಗ ಸುಣ್ಣವೆಲ್ಲ ಮಾಯವಾಗಿ ಸಣ್ಣ ಮಲ್ಲಿಗೆ ಹೂವು ಆಗುತ್ತದೆ. ಆಗ ಸಿದ್ದಪ್ಪಾಜಿಯವರು ಒಳಗಡೆ ಹೋಗಿ ಹೂವಿನ ಮೇಲೆ ಮಲಗಿದ್ದಾರೆ.

ಬೆಳಿಗ್ಗೆ ಆದಾಗ ಪಂಚಾಳದ ದೊರೆಗಳು ಕಬ್ಬಿಣದ ಭಿಕ್ಷೆಯನ್ನು ಕೊಡುತ್ತೇವೆ ಹೇಳು ಜಂಗಮ ಅಂದಾಗ ಸಿದ್ದಪ್ಪಾಜಿಯವರು ಬರುತ್ತೇನೆ ಎಂದೂ ಹೇಳಿ ಬಾವಿಯಿಂದ ಬೇಗ ಹೇಳುತ್ತಾರೆ.

ಸಿದ್ದಪ್ಪಾಜಿಯವರು ನೀವು ಮಾಡಿದ ಎಲ್ಲಾ ಸತ್ಯವನ್ನ ನಾನು ಮಾಡಿದ್ದೇನೆ ಈಗಲಾದರೂ ಕಬ್ಬಿಣದ ಭಿಕ್ಷವನ್ನ ನಮ್ಮ ಗುರುವಿಗೆ ಕೊಟ್ಟು ಬಿಡ್ರಪ್ಪ ಎಂದರಂತೆ. ಆಗ ರಾಜರು ಇನ್ಯಾವ ಸತ್ಯವನ್ನು ನಾವು ಮಾಡಬೇಕು ಅಂತಹೇಳಿ ಅಂಗೈ ಮೇಲೆ ಕಾದ ಕಬ್ಬಿಣವನ್ನೆ ತೆಗೆದು ಮಡಗಿರಿ ಎಂದು ಆಳುಗಳಿಗೆ ಹೇಳುತ್ತಾರೆ. ಆಗ ಕಬ್ಬಿಣವನ್ನ ಕಾಯಿಸಿ ಜಂಗಮ ಎರಡು ಹಸ್ತವನ್ನ ಹಿಡಿ ಎಂದು ಹೇಳಿದಾಗ ಸಿದ್ದಪ್ಪಾಜಿಯವರು ಅಂಗೈಯನ್ನು ಹಿಡಿದುಕೊಂಡರಂತೆ ಆಗ ಅವರು ಕಾದಗಟ್ಟಿಯನ್ನು ಅಂಗೈನ ಮೇಲೆ ಹಾಕಿದಾಗ ಸಿದ್ದಪ್ಪಾಜಿಯವರು ಧರೆಗೆ ದೊಡ್ಡವರನ್ನ ನೆನೆಸಿಕೊಂಡು ಗುರುವೆ ಕಾಪಾಡು ಅಂತ ಕೇಳಿಕೊಂಡಾಗ ಆ ಕಾದ ಕಬ್ಬಿಣ ತಾವರೆ ಹೂವಾಗಿ ರೂಪುಗೊಳ್ಳುತ್ತದೆ.

ಹಲಗೂರಿನ ದೊರೆಗಳು ಇನ್ನೂ ಸಮಾಧಾನ ಆಗೋದಿಲ್ಲ. ಆಗ ಅವರು ನಾವೊಂದು ಉಕ್ಕಿನ ಕುದುರೆ ಮಾಡಿಕೊಡುತ್ತೇವೆ. ನೀನು ಅದಕ್ಕೆ ಜೀವ ಕೊಟ್ಟು ಆ ಕುದುರೆಯ ಮೇಲೆ ಈ ಹಲಗೂರಿನ ಬೀದಿ ಒಳಗೆ ಬಂದು ಬಿಟ್ಟರೆ ಜಂಗಮ ನಿನಗೆ ಕಬ್ಬಿಣದ ಭಿಕ್ಷೆಯನ್ನು ಕೊಡುತ್ತೇವೆ ಎನ್ನುತ್ತಾರೆ.

ಆಗ ಹಲಗೂರಿನ ರಾಜರು ಉಕ್ಕಿನ ಕುದುರೆಯನ್ನು ಮಾಡಿಕೊಟ್ಟರಂತೆ ಆಗ ಸಿದ್ದಪ್ಪಾಜಿಯವರು ರಾಜ ಬೊಪ್ಪೇಗೌಡನ ಪುರಕ್ಕೆ ಕೈಎತ್ತಿ ಮುಗಿದು ಧರೆಗೆ ದೊಡ್ಡವರ ಪಾದ ನೆನಯುತ್ತಾರೆ. ಆಗ ಧರೆಗೆ ದೊಡ್ಡವರ ಪಾದಕ್ಕೆ ಅರಿವಾಗಿ ಉಕ್ಕಿನ ಕುದುರೆಗೆ ಕಪ್ಪು ದೂಳ್ತ ಹಾಕಿದರಂತೆ. ಉಕ್ಕಿನ ಕುದುರೆಗೆ ಕಪ್ಪು ದೂಳ್ತ ಹಾಕಿದ ತಕ್ಷಣ ಉಕ್ಕಿನ

ಕುದುರೆ ಸಿದ್ದಪ್ಪಾಜಿ ಕಣ್ಣಿಗೆ ಜೀವ ಕುದುರೆ ಆಗುತ್ತದೆ. ಆಗ ಆ ಜೀವದ ಕುದುರೆ ಮಾಡಿಕೊಂಡು ಸಿದ್ದಪ್ಪಾಜಿ ಹಲಗೂರಿನ ಊರು ಒಳಗೆ ಸುತ್ತಿಕೊಂಡು ಬರುತ್ತಾರೆ ಆಗ ಸಿದ್ದಪ್ಪಾಜಿ ನೀವು ಹೇಳಿದ ಸತ್ಯವನ್ನ ಮಾಡಿದ್ದೇನೆ ಈಗಲಾದರು ಕಬ್ಬಿಣದ ಭಿಕ್ಷೆಯನ್ನ ಕೊಡ್ರಣ್ಣ ಎಂದರಂತೆ. ಆಗ ಸಿದ್ದಪ್ಪಾಜಿಯವರಿಗೆ ಕಬ್ಬಿಣದ ಭಿಕ್ಷೆಯನ್ನ ಅವರು ಕೊಡುವುದಿಲ್ಲ.

ಮಂಟೇದ ಲಿಂಗಯ್ಯನವರಿಗೆ ಅರಿವಾಗಿ ಇಡೀ ಊರಿನ ಎಲ್ಲಾ ಮಾರಿಯರನ್ನ ಹಲಗೂರಿಗೆ ಬಿಡುತ್ತಾರೆ. ಆಗ ಮಾರಿಯರು ನುಗ್ಗಿದ ಮನೆಯ ಇಲಿ, ಹೆಗ್ಗಣ ಸಾಯುತ್ತವೆ. ಅಲ್ಲಿದ್ದ ಜನರೆಲ್ಲರು ಸಾಯುತ್ತಾರೆ. ಅಲ್ಲಿದ್ದ ಚಿಕ್ಕ ಮಕ್ಕಳು ಸಹ ಸತ್ತಿದ್ದಾರೆ. ಆಗ ಧರೆಗೆ ದೊಡ್ಡವರು ಹಲಗೂರು ಪಾಂಚಳಗೇರಿಗೆ ಶಾಪ ಕೊಟ್ಟ ಮಾರಿಯರನ್ನ ಕೂಡುಬುಟ್ಟು ಹಲಗೂರು ಹಾಳಾಗಲಿ ಎನ್ನುತ್ತಾ ಅವರು ರಾಜಬೊಪ್ಪೇಗೌಡನ ಪುರಕ್ಕೆ ಬರುತ್ತಾರೆ.

ಹಲಗೂರಿನ ರಾಜರು ಇಡೀ ಊರು ಹಾಳಾದ ಮೇಲೆ ನಾವೇಕೆ ಇಲ್ಲಿರಬೇಕು ನಿಮ್ಮ ಜೊತೆ ಬಂದು ನಿಮಗೆ ಶಿಷ್ಯರಾಗುತ್ತೇವೆ ಅಂತಹೇಳಿ ಹಾರೆ ಮೂರು ಎಲ ಗುದಲಿ ಮೂರು ಬಾಂಡಲಿ ಮೂರು ಒಂಬತ್ತು ಆಯುಧಗಳನ್ನು ಮಾಡಿಕೊಂಡು ಸಿದ್ದಪ್ಪಾಜಿಯ ಜೊತೆಯಲ್ಲಿ ಹಲಗೂರು ಬಿಟ್ಟು ಬೊಪ್ಪೇಗೌಡನ ಪುರಕ್ಕೆ ಬರುತ್ತಾರೆ. ಆಗ ಬಂದಂತಹ ಏಳು ಜನ ಪಾಳೇಗಾರರು ಜಗದ್ಗುರುಗಳು ಮುಂಭಾಗ ನಿಲ್ಲಿಸುತ್ತಾನೆ. ಆಗ ಧರೆಗೆ ದೊಡ್ಡವರಿಗೆ ಕೈ ಎತ್ತಿ ಮುಗಿಯುತ್ತಾರೆ.

ಪಾಳೇಗಾರರು ಸ್ವಾಮಿ ನಾವು ಇನ್ನೂ ಮುಂದೆ ನಿಮಗೆ ಶಿಶು ಮಕ್ಕಳಾಗಿ ನಿಮ್ಮ ಮಗ ಸಿದ್ದಪ್ಪಾಜಿಗೂ ಶಿಶು ಮಕ್ಕಳಾಗಿ, ನಿಮ್ಮನ್ನೂ ನಮ್ಮ ಮನೆಯ ದೇವರು ಮಾಡಿಕೊಂಡು ಬಾಳುತ್ತೇವೆ ಎಂದು ಹೇಳೀ ನಾವು ಮತ್ತೊಂದು ದೇವರನ್ನ ಬೇಡುವುದಿಲ್ಲ ಎನ್ನುತ್ತಾರೆ.

ಮಂಟೇದ ಲಿಂಗಯ್ಯ ಹಲಗೂರು ದೊರೆಗಳೆ ನೀವು ನಮ್ಮ ಶಿಶು ಮಕ್ಕಳಾದ ಮೇಲೆ ಚಿಕ್ಕದೊಂದು ಹಳ್ಳಿಯನ್ನ ಚಿಕ್ಕಲ್ಲೂರು ಅಂತ ಮಾಡಿದ್ದೇನೆ. ನೀವು ಅಲ್ಲಿ ಹೋಗಿ ಬಾಳಿ ಬದುಕಿ ಅಲ್ಲಿ ನನ್ನ ಮಗನಾದ ಸಿದ್ದಪ್ಪಾಜಿಗೆ ಒಂದು ಮಠವನ್ನ ಕಟ್ಟಿರಿ ಎಂದರಂತೆ. ಆಗ ಹಲಗೂರು ದೊರೆಗಳು ಸಿದ್ದಪ್ಪಾಜಿಯನ್ನ ನೆನೆದುಕೊಂಡು ಚಿಕ್ಕಲೂರಿಗೆ ಬರುತ್ತಾರೆ. ಆದ ಅಲ್ಲಿಗೆ ಬಂದು ಮಠವನ್ನೆ ಕಟ್ಟಿಸಿ ಅಲ್ಲಿಗೆ ಸಿದ್ದಪ್ಪಾಜಿ ಮಠ ಅಂತ ನಾಮಕರಣ ಮಾಡುತ್ತಾರೆ.

ಹಲಗೂರು ದೊರೆಗಳು ಮಠಕಟ್ಟಿಸಿ ಧರೆಗೆ ದೊಡ್ಡವರ ಬಳಿಗೆ ಬಂದು ಮುಂಭಾಗದಲ್ಲಿ ನಿಂತುಕೊಂಡು ನಿಮಗೆ ಶಿಷ್ಯರಾಗಿ ನಿಮಗೆ ಒಕ್ಕುಲಾಗಿ ಮಠ ಕಟ್ಟಿದ್ದೇವೆ ಸ್ವಾಮಿ ಎನ್ನುತ್ತಾರೆ. ಧರೆಗೆ ದೊಡ್ಡವರು ದೊಡ್ಡಮ್ಮ ತಾಯಿಗೆ ನನ್ನ ಮಗನ ಶಿಷ್ಯರು

ಬಂದವರೆ ತಾಯಿ ಇವರಿಗೆ ಮಠ ಕಟ್ಟಿದವರಿಗೆ ನಮ್ಮ ಮನೆಗೆ ಬಂದವರಿಗೆ ಊಟ ಮಾಡಿಸಿ ಕಳುಹಿಸು ತಾಯಿ ಅನ್ನುತ್ತಾರೆ.

ದೊಡ್ಡಮ್ಮ ತಾಯಿ ಸಿದ್ದಪ್ಪಾಜಿ ಶಿಷ್ಯಂದಿರಿಗೆ ಆಡುಗೆ ಮಾಡಿ ನೀರಂಬಲಿ ಬಿಟ್ಟರಂತೆ ಹಾಲೆ ಸೊಪ್ಪು ಹಾಕುತ್ತಾರೆ. ಆಗ ಧರೆಗೆ ದೊಡ್ಡವರು ನನ್ನ ಮಗನಿಗೆ ಮಠ ಕಟ್ಟಿ ನಮ್ಮ ಮಠಕ್ಕೆ ನೀವು ಬಂದಿದ್ದೀರಿ ಈ ಹಾಲೆ ಸೊಪ್ಪು ನೀರಂಬಲಿ ನಿಮಗೆ ಸ್ಥಿರವಾಗಲಿ ಎಂದು ಶಾಪ ಕೊಡುತ್ತಾರೆ.

ಹಲಗೂರಿನ ದೊರೆಗಳು ಧರೆಗೆ ದೊಡ್ಡವರ ಬಳಿಗೆ ಓಡಿ ಓಡಿ ಬರುತ್ತಾರೆ. ಏಕೆಂದರೆ ನಾವು ಮುತ್ತು ರತ್ನವನ್ನೆ ಊಟ ಮಾಡಿ ಬೆಳೆದಂತ ದೊರೆಗಳು ಈ ಹಾಲೆ ಸೊಪ್ಪು ನೀರಂಬಲಿ ಕುಡಿಯಬೇಕ ನಾವು ಖಂಡಿತವಾಗಿ ಕುಡಿಯುವುದಿಲ್ಲ ಅಂತ ಹೇಳಿ ಧರೆಗೆ ದೊಡ್ಡವರ ಹತ್ತಿರ ಬರುತ್ತಾರೆ.

ಧರೆಗೆ ದೊಡ್ಡವರು ಹಲಗೂರಿನ ದೊರೆಗಳಿಗೆ ಮುತ್ತು ರತ್ನಗಳನ್ನು ಅವರ ಬಾಯಿಗೆ ಹಾಕುತ್ತಾರೆ ಆಗ ಏಳು ಜನ ದೊರೆಗಳು ಮುತ್ತು ರತ್ನವನ್ನ ತಿನ್ನುವುದಕ್ಕೆ ಆಗುವುದಿಲ್ಲ.

ಅವರು ಧರೆಗೆ ದೊಡ್ಡವರ ಮತ್ತು ದೊಡ್ಡಮ್ಮ ತಾಯಿಯ ಮುಖ ನೋಡುತ್ತಾರೆ. ಆಗ ಧರಗೆ ದೊಡ್ಡವರು ಏನು ಭಾಗ್ಯಬೇಕು ಕೇಳಿ ಎನ್ನುತ್ತಾರೆ.

ಅವರು ಏನೂ ಮಾತನಾಡದೆ ಸುಮ್ಮನೆ ನಿಂತುಕೊಳ್ಳುತ್ತಾರೆ ಆಗ ಧರೆಗೆ ದೊಡ್ಡವರು. ನರರು ಕೊಟ್ಟ ಭತ್ತದ ಹೊರೆಯನ್ನು ನೀವು ತೆಗೆದುಕೊಂಡು ನಾನು ಪಡೆದ ಭೂಮಿಯ ಮೇಲೆ ವಾಸ ಮಾಡಿ ಎನ್ನುತ್ತಾರೆ. ಧರೆಗೆ ದೊಡ್ಡವರು ನಾನು ಪಡೆದ ಈ ಭೂ ಲೋಕದಲ್ಲಿ ವಾಸ ಮಾಡಿರಿ ಅಂತಹೇಳಿ ಎಲ್ಲಾ ಶಿಷ್ಯರನ್ನ ಮತ್ತು ಮಕ್ಕಳನ್ನ ಪ್ರೀತಿಯಿಂದ ಕರೆಯುತ್ತಾರೆ.

ಎಲ್ಲಾ ಶಿಷ್ಯರು ಮಕ್ಕಳು ಬಂದು ಅವರ ಮುಂಭಾಗದಲ್ಲಿ ಕುಳಿತುಕೊಳ್ಳುತ್ತಾರೆ ಆಗ ಮಂಟೇದ ಲಿಂಗಯ್ಯ, ಮಕ್ಕಳೇ ನನಗೆ ನರಲೋಕದ ಆಟ ಸಾಕಾಯ್ತು ನಾನು ಮರ್ತ್ಯ ಲೋಕಕ್ಕೆ ಹೋಗಬೇಕು ಅಂತ ಹೇಳುತ್ತಾರೆ.

ರಾಚಪ್ಪಾಜಿಯನ್ನ ಕರೆದು ನೀನು ಈ ರಾಜ ಬೊಪ್ಪೇಗೌಡನ ಪುರವನ್ನ ಬಿಟ್ಟು ಚಂದಗಾಲಂತ ಪುರ, ಮಿರ್ಲೆ ಸಾಲಿಗ್ರಾಮದಲ್ಲಿ ಅಲ್ಲಿ ಹೊಳೆಯ ದಡದಲ್ಲಿ ನೀನು ನೆಲೆಸು. ಅಲ್ಲಿ ನಿನಗೆ ಕಪ್ಪಡಿ ಕೈಲಾಸ ಮಾಡುತ್ತೇನೆ ಅಲ್ಲಿ ಹೋಗಿ ನೀನು ಒರಗಯ್ಯ ಅಂತ ಶಾಪ ಕೊಡುತ್ತಾರೆ.

ರಾಚಪ್ಪಾಜಿ ಧರೆಗೆ ದೊಡ್ಡವರು ಮುಂದೆ ಬಂದು ನಿಂತುಕೊಂಡು ಬಹಳ ದುಃಖ ಪಡುತ್ತಾನೆ. ಆಗ ದೊಡ್ಡಮ್ಮ ತಾಯಿಗೆ ನಿನಗೆ ನನ್ನ ಆಸೆ ಬೇಡ ನನ್ನನ್ನು ಮರೆತು ಹೋಗು ತಾಯಿ ಎಂದು ಶಾಪ ಕೊಡುತ್ತಾರೆ.

ಹಾಗೆಯೇ ಮಡಿವಾಳ ಮಾಚಯ್ಯನಿಗೆ ನನ್ನ ಮಗ ಸಿದ್ದಪ್ಪಾಜಿ ಚಿಕ್ಕಲ್ಲೂರಿನಲ್ಲಿ ಒಡೆದು ಮೂಡುತ್ತಾನೆ ಅಲ್ಲಿ ನನ್ನ ಮಠದ ಬಿರುದುಗಳನ್ನ ತೆಗೆದುಕೊಂಡು ಹೋಗುವಾಗ ನೀನು ಮುಂದಲ ಮಡಿ ಬುಡಬೇಕು, ನಿನ್ನ ಮಡದಿ ಮಲ್ಲಿಗದೇವಿ ಹಿಂದಲ ಮಡಿ ಎತ್ತಬೇಕು ನೀವು ಸಿದ್ದಪ್ಪಾಜಿಗೆ ಶಿಶು ಮಕ್ಕಳಾಗಿ ಈ ಭೂಲೋಕದಲ್ಲಿ ಬಾಳಿ ಎಂದು ಶಾಪ ಕೊಡುತ್ತಾರೆ.

ಧರೆಗೆ ದೊಡ್ಡವರು ದೊಡ್ಡಮ್ಮ ತಾಯಿಗೆ ನನ್ನ ಮಗನು ಬಂದಾಗ ನನ್ನ ಮುತ್ತಿನ ಜೋಳಿಗೆ, ನಾಗ ಬೆತ್ತ ಇವುಗಳನ್ನ ಕೊಟ್ಟುಬಿಡು ಎಂದು ದೊಡ್ಡಮ್ಮನವರಿಗೆ ಹೇಳುತ್ತಾರೆ.

ನಾನು ಸಿದ್ದಪ್ಪಾಜಿ ಬರುವುದಕ್ಕೆ ಮೊದಲಾಗಿ ನಾನು ಪಾತಾಳ ಲೋಕಕೆ ಹೋಗಬೇಕು ಅಂತ ಹೇಳಿ ಸ್ವಾಮಿ ನಿಜವನ್ನೆ ನುಡಿತ್ತಾರೆ ಆಗ ಧರೆಗೆ ದೊಡ್ಡವರು ಈಶ್ವರ, ಬ್ರಹ್ಮ, ವಿಷ್ಣು ಅಷ್ಟ ಕೋಟಿ ದೇವಮಾನವರನ್ನ ಮರೆತು ಅವರು ಪಾತಾಳ ಲೋಕಕ್ಕೆ ಹೋಗುತ್ತಾರೆ ಆಗ ಘನ ನೀಲಿ ಸಿದ್ದಪ್ಪಾಜಿ ಬಂದು ನನ್ನ ಪಡೆದಂತ ಗುರು ಏನಾಗಿಬಿಟ್ಟರು ಅಂತ ಹೇಳಿ ಓಡಿ ಓಡಿ ಬಂದು ರಾಜ ಬೊಪ್ಪೇಗೌಡನ ಪುರದ ಪಾತಾಳದ ಬಾವಿಯ ಮುಂಭಾಗದಲ್ಲಿ ಕುಳಿತುಕೊಂಡು ಬಹಳ ದುಃಖ ಪಡುತ್ತಾರೆ.

ಸಿದ್ದಪ್ಪಾಜಿ ಗುರುವೆ ನೀವು ಪಡೆದ ಮಗನಾ ಮೇಲೆ ನಿಮಗೆ ಕರುಣೆ ಇಲ್ಲವೆ ನನ್ನಪ್ಪ ನನ್ನನ್ನು ಮರೆತು ನೀವು ಹೋಗಬಹುದಾ ಮಾಯಿಕಾರ ಎನ್ನುತ್ತಾನೆ.

ಧರೆಗೆ ದೊಡ್ಡವರು ಒಳಗಡೆ ನಿಂತುಕೊಂಡು ನಿನ್ನನ್ನ ನಾನು ಮರೆತಿಲ್ಲಾ ಕಂದ. ಮುತ್ತಿನ ಜೋಳಿಗೆಯನ್ನ ನಿನಗಾಗಿ ಮಡಗಿದ್ದೇನೆ ಉರಿಗದ್ದಿಗೆಯ ಮೇಲೆ ಮಡಗಿದ್ದೇನೆ. ನೀನು ಅವುಗಳನ್ನ ತೆಗೆದುಕೊಂಡು ಚಿಕ್ಕಲ್ಲೂರಿಗೆ ಹೋಗಿ ಒಡೆದು ಮೂಡು ಕಂದ ಎಂದು ಶಾಪಕೊಟ್ಟು. ಆಗ ಧರೆಗೆ ದೊಡ್ಡವರು ಪಾತಾಳ ಲೋಕಕ್ಕೆ ಮಾಯವಾಗಿ ಹೋಗುತ್ತಾರೆ. ಆ ಕಡೆ ರಾಚಪ್ಪಾಜಿ ಮತ್ತು ಪತಿ ದೊಡ್ಡಮ್ಮ ಚಿಂತೆ ಮಾಡಿಕೊಂಡು ಬರುವಾಗ ಮುಟ್ಟನಹಳ್ಳಿ ತೋಪಿಗೆ ಬಂದು ದೊಡ್ಡಮ್ಮ ಮುಟ್ಟು ತಟ್ಟಿಗೆ ಒಳಗಾಗುತ್ತಾಳೆ. ಆಗ ರಾಚಪ್ಪಾಜಿ ದೊಡ್ಡಮ್ಮನನ್ನ ಮುಟ್ಟುನಹಳ್ಳಿ ತೋಪಿನಲ್ಲಿ ಬಿಟ್ಟು ಅವರು ಮೈಸೂರು ಮನಸ್ಥಾನಕೆ ಬರುತ್ತಾರೆ.

ಮೈಸೂರಿಗೆ ಬಂದು ಮೈಸೂರು ಹೆಚ್ಚು ಒಕ್ಕಲಾಗಲಿ ಎಂದು ಹರಸಿ ಆರ್ಶೀವಾದ ಮಾಡಿ ಆಗಲೀಗ ರಾಜರ ವಂಶದ ಮಕ್ಕಳು ಬೊಪ್ಪೇಗೌಡನ ಪುರದ ಬುದ್ಧಿ, ಮಳವಳ್ಳಿ ಬುದ್ಧಿ ಅಂತ ಹೇಳಿ ನನಗೆ ಶಿಶು ಮಕ್ಕಳಾಗಿ ಬರುತ್ತಾರೆ. ಮೈಸೂರು

ಮನಸ್ತಾನದಲ್ಲಿ ರಾಚಪ್ಪಾಜಿ ಪೂಜೆ ಅಂತೇಳಿ ಶಾಪಕೊಟ್ಟು ಮೈಸೂರು ಬಿಟ್ಟು ಹಸಿದು ಹಣ್ಣಾಗಿ ದಣಿದು ದಾವಾಗಿ ಹೆಬ್ಬಾಳ ಅನ್ನುವ ಗ್ರಾಮಕೆ ಬಂದರಂತೆ ಅಲ್ಲಿ ಒಬ್ಬ ರೈತ ಹೊಲ ಉಳುತ್ತಿದ್ದವನ ಬಳಿಗೆ ಬಂದು ನನಗೆ ಒಂದು ಎಳನೀರು ತಂದು ದಾವು ಪರಿಹಾರ ಮಾಡಿ ಎಂದರಂತೆ ಆಗ ಆ ಮಾತನ್ನ ಕೇಳಿ ಅವನಿಗೆ ಸಿಟ್ಟು ಬಂದು ಬಂದ ದಾರಿ ನೋಡಿಕೊಂಡು ಸುಮ್ಮನೆ ಹೋಗು ಎಂದು ಹೇಳುತ್ತಾನೆ.

ಆಗ ರಾಚಪ್ಪಾಜಿ ಮುಕ್ಕಣ್ಣನನ್ನು ನೆನೆದು ಅಂತು ತೆಂಗಿನ ಮರ ನೋಡಿದರು. ಆಗ ತೆಂಗಿನ ಮರ ಸರಸರನೆ ಬಾಗಿ ರಾಚಪ್ಪಾಜಿಯವರ ಮುಂಭಾಗಕ್ಕೆ ಬಂದು ನಿಂತು ಕೊಂಡಿತ್ತು. ಆಗ ರಾಚಪ್ಪಾಜಿ ಎಳನೀರು ಕಿತ್ತುಕೊಂಡು ಕೇಳಪ್ಪ ನಿನಗೆ ಮಕ್ಕಣ್ಣೇಶ್ವರ ಎಂಬ ಹೆಸರಾಗಲಿ ಅಂತ ಹೇಳಿ ಕಪ್ಪಡಿ ಕೈಲಾಸದಲ್ಲಿ ನಾನು ಒರಗುತ್ತೇನೆ ಆಗ ನನ್ನ ಶಿವ ಪೂಜೆ ಆಗಬೇಕು ಅಂತಹೇಳಿ ನಿನಗೆ ಮೋಕ್ಷವಾಗಲಿ ಅಂತ ಶಾಪಕೊಟ್ಟು ದೇವರು ದಯಮಾಡಿಸುತ್ತಾರೆ. ಈ ಕಡೆ ದೊಡ್ಡಮ್ಮ ನನ್ನ ಗುರು ಹೋದ ಸ್ಥಾನಕೆ ನಾನು ಹೋಗಬೇಕು ಅಂತ ಹೇಳಿ ಆರೇಳು ಉದ್ದ ಗುಂಡಿ ಒಳಗೆ ಮಲಗಿದರಂತೆ. ಈ ರೀತಿಯಾಗಿ ಈಗ ಮುಟ್ಟನಹಳ್ಳಿ ತೋಪು ಎಂದು ಹೆಸರನ್ನ ಪಡೆದುಕೊಂಡಿತು. ರಾಚಪ್ಪಾಜಿಯವರು ಕಪ್ಪಡಿ ಕೈಲಾಸಕ್ಕೆ ಹೋಗಿ ಅಲ್ಲಿ ಏಳು ಆಳು ಉದ್ದ ಗುಂಡಿಯೊಳಗೆ ಅಡಕವಾಗಿ ಹೋಗುತ್ತಾರೆ.

ಸಿದ್ದಪ್ಪಾಜಿಯಾದಂತಹ ನೀಲಗಾರರ ಗಂಡ ರಾಜ ಬೊಪ್ಪೇಗೌಡನ ಪುರವನ್ನ ಬಿಟ್ಟು ಮಡಿವಾಳ ಮಾಚಯ್ಯ ಮತ್ತು ಫಲಾರದಯ್ಯ ಇಬ್ಬರನ್ನು ಕರೆದುಕೊಂಡು ಚಿಕ್ಕಲ್ಲೂರಿಗೆ ಹೊರಟು ಹೋಗಿ ನಮ್ಮ ತಂದೆ ಆಳಿರುವ ಲೋಕವನವನ್ನ ನಾನು ಆಳಬೇಕು ಅಂತ ಹೇಳಿ ಸಿದ್ದಪ್ಪಾಜಿಯು ಚಿಕ್ಕಲೂರಿನಲ್ಲಿ ಒಡೆದು ಮೂಡುತ್ತಾರೆ.

ಈ ಮಂಟೇಸ್ವಾಮಿಯವರ ಕಾವ್ಯವನ್ನು ನಾವು ಅಧ್ಯಾಯನ ಮಾಡಿದಾಗ ಇದರಲ್ಲಿ ನಾವು ಸಂಸ್ಕೃತಿಗೆ–ಪ್ರತಿ ಸಂಸ್ಕೃತಿಯನ್ನು ಈ ಕಾವ್ಯವು ಒಳಗೊಂಡಿರುವುದನ್ನ ನಾವು ಕಾಣಬಹುದಾಗಿದೆ. ಹಾಗೆಯೆ ಮಂಟೇಸ್ವಾಮಿಯು ಶ್ರೀಮಂತರ ದಬ್ಬಾಳಿಕೆಯನ್ನು ಸಹಿಸದೆ ಅವರನ್ನು ಮಟ್ಟಹಾಕಿ ಸರಿದಾರಿಗೆ ತೆಗೆದುಕೊಂಡು ಬರುವುದು ಈ ಕಾವ್ಯದ ಒಂದು ಪೂರ್ಣ ಚಿತ್ರ ನಮ್ಮ ಕಣ್ಣು ಮುಂದೆ ಬರುತ್ತದೆ. ಆದುದರಿಂದ ಈ ಕಾವ್ಯವು ಎಲ್ಲಾ ಉತ್ತಮ ಅಂಶಗಳನ್ನು ಒಳಗೊಂಡಿರುತ್ತದೆ.

## ಅಧ್ಯಾಯ – ೩

### ಅಧ್ಯಯನದ ಪರ್ಯಾಯ ಸಂಸ್ಕೃತಿ ಪ್ರತಿಪಾದನೆ :-

ಯಾವುದೇ ಒಂದು ಸಂಸ್ಕೃತಿ ದೋಷಗಳಿಂದ ಕೂಡಿದಾಗ ಅದು ಆರೋಗ್ಯದ ಸಂಸ್ಕೃತಿ ಎನಿಸಿಕೊಳ್ಳುವುದಿಲ್ಲ. ಇಂತಹ ಅನಾರೋಗ್ಯ ಸಂಸ್ಕೃತಿ ಒಳಗೆ ಕಂಡು ಬರುವ ದೋಷಗಳನ್ನು ಬೇರೆಯವರು ಕೆಡುವುತ್ತಾ ಹೋಗುತ್ತಾರೆ. ಅಂತಹ ವೈದಿಕ ಸಂಸ್ಕೃತಿಯ ಪೊಳ್ಳುತನ ಮತ್ತು ಭ್ರಷ್ಟತೆಯನ್ನ ಅಸಮಾನತೆಯನ್ನ ತೋರಿಸಿ ಅವುಗಳನ್ನ ಕೆಡವಿ ಅದಕ್ಕೆ ಪ್ರತಿಯಾದ ಸಂಸ್ಕೃತಿಯನ್ನು ಕಟ್ಟಿಕೊಡುವುದೇ ಪರ್ಯಾಯ ಸಂಸ್ಕೃತಿ.

ಪಶು ಪತಿಯು ಹಸುವನ್ನು ಪೂಜಿಸುವುದು ಆರ್ಯ ಸಂಸ್ಕೃತಿಯಾದರೆ ಆದಿ ಮಾನವನ ಬೇಟೆಯ ಪ್ರತೀಕವಾದ ಮೈಲಾರ ಎಂದು ಕರೆಸಿಕೊಳ್ಳುವ ನಾಯಿಯನ್ನು ಪೂಜಿಸುವುದು ಪರ್ಯಾಯ ಸಂಸ್ಕೃತಿ.

ಬ್ರಹ್ಮ ವಿಷ್ಣುವನ್ನ ಪೂಜಿಸುವುದು ವೈದಿಕ ಸಂಸ್ಕೃತಿಯಾದರೆ ಮಾರಿ ಮಸಣಿಯಂತಹ ಕೆಳವರ್ಗದ ದೇವತೆಗಳನ್ನ ಪೂಜಿಸುವುದು ಪರ್ಯಾಯ ಸಂಸ್ಕೃತಿ.

ಮಂಟೇಸ್ವಾಮಿಯು ಕರ್ನಾಟಕ ಜನಪದ ಮಹಾಕಾವ್ಯದ ಒಬ್ಬ ಪರಂಪರೆಯ ನಾಯಕ. ಹಾಗೆಯೆ ಕರ್ನಾಟಕ ಜನಪದ ಕಲೆಗಳಲ್ಲಿ ಒಂದಾದ ಮಂಟೇಸ್ವಾಮಿಯ ಹಾಡುಗಳು ಮತ್ತು ಆ ಕಲೆಯ ಕರ್ತೃ ಮಂಟೇಸ್ವಾಮಿ.

ಈ ಮಂಟೇಸ್ವಾಮಿಯ ಮಹಾಕಾವ್ಯ ನಮ್ಮ ದೇಶದ ಇತರೆ ಮಹಾ ಕಾವ್ಯಗಳಷ್ಟೆ ಮುಖ್ಯವಾದುದು.

"ಫಿನ್‌ಲ್ಯಾಂಡಿನ ಕಲೇವಾಲ ವಿಶ್ವದ ಮೊದಲ ಸುಧೀರ್ಘ ಜನಪದ ಕಾವ್ಯ ಎನಿಸಿದ್ದು ಇದು ೨೨೭೯೫ ಸಾಲುಗಳಿಂದ ಕೂಡಿದೆ". ಹಾಗೆಯೆ ಕನ್ನಡದ ಮಂಟೇಸ್ವಾಮಿ ಕಾವ್ಯ ಹಾಗೂ "ಮಲೆ ಮಹದೇಶ್ವರನ ಜನಪದ ಮಹಾಕಾವ್ಯವು ಸುಮಾರು ೩೨೦೦೦ಕ್ಕೂ ಹೆಚ್ಚು ಸಾಲುಗಳ ಸುಧೀರ್ಘ ಕಾವ್ಯವಾಗಿದೆ"-೨ ಇವುಗಳು ಭಾರತ ಹಾಗೂ ವಿಶ್ವದ ಜನಪದ ಮಹಾಕಾವ್ಯಗಳಿಗೆ ಸ್ಪರ್ಧಿಯಾಗಿ ನಿಲ್ಲಬಲ್ಲ ಮಹಾ ಕಾವ್ಯಗಳಾಗಿವೆ.

ಮಂಟೇಸ್ವಾಮಿ ಕಾವ್ಯವು ಕನ್ನಡದ ನೆಲದಲ್ಲಿ ತನ್ನದೆ ಆದ ಸಂಸ್ಕೃತಿ ಪಂಥ ಒಂದರ ಹುಟ್ಟಿಗೆ ಕಾರಣನಾಗಿದ್ದಾನೆ. ಇದು ೧೨ನೇ ಶತಮಾನದ ವಚನ ಚಳುವಳಿಯ ಸ್ಥಾವರಗೊಂಡ ನಂತರದಲ್ಲಿ ಮಾನವತೆ. ಸಮಾನತೆ ಜೊತೆಯಲ್ಲಿ ಜಾತ್ಯಾತೀತ ಧರ್ಮಾತೀತವಾಗಿ ಕಾಣಿಸಿಕೊಂಡವ ಮಂಟೇಸ್ವಾಮಿ ಈತನು ಮಲೆ ಮಹಾದೇಶ್ವರ,

ಅಲ್ಲಮ, ಬಸವಣ್ಣನವರಂತೆ ಸಾಂಸ್ಕೃತಿಕ ಚರಿತ್ರೆಯನ್ನ ಉಳ್ಳವನಾಗಿದ್ದಾನೆ. ಹಾಗೆ ತನ್ನದೆ ಆದ ಒಂದು ಪಂಥದ ಸ್ಥಾಪಕನಾಗಿದ್ದಾನೆ.

ಜನಪದ ಒಂದು ರೀತಿಯಲ್ಲಿ ಅರೆ ಇತಿಹಾಸ ಬದಲಾದ ರೂಪದಲ್ಲಿ ಅಲೆದಾಡುವ ಚರಿತ್ರೆ ಹಾಗಾಗಿ ಮಂಟೇಸ್ವಾಮಿ ಹೆಸರಿನ ಜನಪದ ಮಹಾಕಾವ್ಯವೇ ಅವನ ಸಾಂಸ್ಕೃತಿಕ ಚರಿತ್ರೆಯೂ ಆಗಿದೆ. ಹಾಗೆ ನೋಡಿದರೆ ಈ ಮಹಾಕಾವ್ಯ ಮಂಟೇಸ್ವಾಮಿಯ ಜೊತೆಗೆ ಹಲವು ಕಾಲ ಘಟ್ಟಗಳ ಹಲವು ವ್ಯಕ್ತಿ ಸಮುದಾಯ ಮತ್ತು ಪಂಥಗಳ ಅಸಲಿ ಚರಿತ್ರೆ ಕೂಡ ಆಗಿದೆ.

ಮಂಟೇಸ್ವಾಮಿ ಕಾವ್ಯವಾಗಲಿ ಯಾವುದೇ ಜನಪದ ಮಹಾ ಕಾವ್ಯಗಳಾಗಲಿ ಅವು ಒಂದು ನಿರ್ದಿಷ್ಠ ವ್ಯಕ್ತಿ ಮತ್ತು ಕಾಲದ ಕತೆಗಳನ್ನಷ್ಟೆ ಹೇಳುವುದಿಲ್ಲ. ಕಾವ್ಯದ ನಾಯಕ ಮತ್ತು ಘಟನೆ ನೆಪಮಾತ್ರ ಇಡೀ ಜನಪದ ಕಾವ್ಯ ಮಂಟೇಸ್ವಾಮಿಯ ಇತಿಹಾಸ ಮತ್ತು ಅವನ ಸಂಸ್ಕೃತಿಯ ಪಲ್ಲಟಗಳನ್ನು ಹೇಳುತ್ತದೆ. ಒಂದು ಪ್ರದೇಶದ ಸಮಸ್ತ ಜನರ ಇತಿಹಾಸ ಮತ್ತು ಸಂಸ್ಕೃತಿಯನ್ನು ಸಂಘರ್ಷ ಮತ್ತು ವಿಕಾಸವನ್ನು ಒಬ್ಬ ವ್ಯಕ್ತಿ ಮತ್ತು ಆತನಿಗೆ ಸಂಬಂಧಿಸಿದ ಘಟನೆಯ ಮೂಲಕ ಹೇಳುತ್ತಿರುತ್ತದೆ. ನಾವು ಮಂಟೇಸ್ವಾಮಿಯ ಜನಪದ ಮಹಾಕಾವ್ಯದಲ್ಲಿ ಇದನ್ನೆ ಕಾಣುತ್ತೇವೆ.

ಮಂಟೇಸ್ವಾಮಿಯ ಸಾಂಸ್ಕೃತಿಕ ಚರಿತ್ರೆ ನಿರಂತರ ಸಂಘರ್ಷದ ಚರಿತ್ರೆಯಾಗಿದೆ. ಹಾಗಾಗಿ ಮಂಟೇಸ್ವಾಮಿ ಸಂಘರ್ಷದ ಬಂಡಾಯದ ಪ್ರತಿಭಟನೆಯ ಸಂಕೇತವಾಗಿದೆ. ಪುರಾತನ ಆದಿಯ ಸಂಸ್ಕೃತಿ ಮತ್ತು ಚರಿತ್ರೆಯ ಬಹುಪಾಲು ವಾರಸುದಾರರು ಅಸ್ಪೃಶ್ಯರು. ಅದೇ ರೀತಿ ಅವರು ಅವೈದಿಕ ಮತ್ತು ಶೈವ ಮೂಲದವರಾಗಿರುತ್ತಾರೆ.

ಮಂಟೇಸ್ವಾಮಿ ಅದೇ ಹಿನ್ನೆಲೆಯ ಚಾರಿತ್ರಿಕ ವ್ಯಕ್ತಿ ಮತ್ತು ಜನಪದ ದೈವ. ಸಾಂಸ್ಕೃತಿಕವಾಗಿ ಮಂಟೇಸ್ವಾಮಿಯನ್ನು ಶಿವನೇ ಮಂಟೇಸ್ವಾಮಿಯಾಗಿ ಅವತರಿಸಿರುವಂತೆ ಬಿಂಬಿಸಲಾಗುತ್ತದೆ. ಹಾಗಾಗಿ ಈತ ಅವೈದಿಕ ಶೈವ, ಅವನ ಭಂಗಿ ಸೇವೆ, ವಾಲುವುದು, ಜೋಲುವುದು, ಜೋಳಿಗೆ, ವಿಭೂತಿ, ಕಪ್ಪು ದೂಳ್ತ ಇವುಗಳನ್ನ ಇಟ್ಟುಕೊಂಡು ಭಕ್ತರಿಂದ ಪೂಜಿಸಿಕೊಳ್ಳುವುದು. ಮಂಟೇಸ್ವಾಮಿ, ಹಲವಾರು ಶಿಷ್ಯರನ್ನ ಪಡೆಯುವುದು, ಹಾಗೆಯೆ ಇವನು ಒಗ್ಗಿದವರನ್ನ ಒಳಗೊಳ್ಳುತ್ತಾ ಶಿಷ್ಯರಾಗಿ ಬರದೆ ಇರುವವರನ್ನ ತನ್ನ ಮಹಿಮೆ ಪವಾಡದಿಂದ ಶಿಷ್ಯರನ್ನಾಗಿ ಪಡೆದು ಅವರೆಲ್ಲರನ್ನು ಮೆಟ್ಟಿನಿಂತು ಗುರುವಾಗಿ ನಿಲ್ಲುತ್ತಾನೆ.

ಮಂಟೇಸ್ವಾಮಿ ಇದ್ದಿಶಕ್ತಿ ಪಡೆದವನಾಗಿ ಪವಾಡಗಳನ್ನ ಮೆರೆಯ ಬಲ್ಲವನಾಗಿದ್ದ. ಇವನು ತನ್ನ ಪವಾಡಗಳಿಂದ ಶಿಷ್ಯರನ್ನ ಪಡೆದು ಮತ್ತು ಮಠಗಳನ್ನ ಅವರಿಂದಲೇ ಕಟ್ಟಿಸಿ ಅಲ್ಲಿ ನೆಲೆಗೊಳ್ಳುವಂತೆ ಮಾಡುವುದು ಇವನ ಸಂಸ್ಕೃತಿಯಾಗಿದೆ. ಮತ್ತು ಮಂಟೇಸ್ವಾಮಿಯ ಅವನ ಶಿಷ್ಯರನ್ನ ಪರೀಕ್ಷೆಗೆ ಗುರಿಪಡಿಸುವುದು ಮತ್ತು

ಅವರಿಗೆ ತಾನು ಏನೆಂಬುದನ್ನ ತೋರಿಸುವುದಾಗಿತ್ತು. ಅಂದಿನ ಸಾಮಾಜಿಕ ಸಂದರ್ಭಕ್ಕೆ ಅದು ಬೇಕಾಗಿತ್ತು. ಸಾಮಾಜಿಕ ಧಾರ್ಮಿಕ ಸಾಂಸ್ಕೃತಿಕ ಸಮಾನತೆ ಮತ್ತು ಶ್ರೇಷ್ಠತೆಯನ್ನ ಪಡೆದು ನಂತರ ನಿರಾಕರಿಸುವುದು ಮಂಟೇಸ್ವಾಮಿಯ ನಡೆಗಳ ನಿಲುವಾಗಿ ಕಾಣುತ್ತದೆ. ಈತ ಕಲ್ಯಾಣ ಪಟ್ಟಣದ ಪ್ರವೇಶ ಮಾಡುವ ಉದ್ದೇಶವೇನೆಂದರೆ ಲಿಂಗವಂತ ಜಂಗಮರನ್ನ ಪರೀಕ್ಷಿಸುವುದು. ದ್ವಾರಪಾಲಕ ಲಿಂಗ ತೋರಿಸು ಎಂದಾಗ ಮಂಟೇಸ್ವಾಮಿ ತನ್ನ ಜಡೆಮುಡಿಯನ್ನ ಒದರಿ ರಾಶಿ-ರಾಶಿ ಲಿಂಗ ಸುರಿಸುತ್ತಾನೆ. ಇದು ಲಿಂಗ ನಿರಾಕಾರಿ ಬೋಳು ಜಂಗಮನಂತ. ಇದೇ ರೀತಿಯಾಗಿ ಮಾದೇಶ್ವರನು ಲಿಂಗಧಾರಣೆ ನಿರಾಕರಿಸಿದ ಜಂಗಮನಾಗಿದ್ದಾನೆ.

ಸಿದ್ದಪ್ಪಾಜಿಯನ್ನ ತನ್ನ ಶಿಷ್ಯನನ್ನಾಗಿ ಪಡೆದುಕೊಂಡಿದ್ದು ಒಂದು ವಿಭಿನ್ನ ಪ್ರಸಂಗವೇ ಸರಿ. ಇದು ಮಂಟೇಸ್ವಾಮಿ ಕಾವ್ಯ ಮತ್ತು ಪರಂಪರೆಯಲ್ಲಿ ಒಂದು ಪ್ರಮುಖ ಘಟನೆ.

ಮಂಟೇಸ್ವಾಮಿ ದೇವಲೋಕದಿಂದ ಭೂಮಿಗೆ ಅವತರಿಸುವುದೇ ಇದಕ್ಕಾಗಿ. ಮಂಟೇಸ್ವಾಮಿ ಸಿದ್ದಪ್ಪಾಜಿಯನ್ನ ಶಿಷ್ಯನನ್ನಾಗಿ ಪಡೆದುಕೊಂಡು ಚಾರಿತ್ರಿಕ ವ್ಯಕ್ತಿಯನ್ನಾಗಿ ಮತ್ತು ಆ ಭಾಗದಲ್ಲಿ ಪ್ರಚಲಿತದಲ್ಲಿದ್ದ ಒಂದು ಧರ್ಮವನ್ನೊ ಸೂಚಿಸುತ್ತದೆ. ಇದು ಆ ಕಾಲದಲ್ಲಿ ನನಡೆದಿರುಬಹುದಾದ ಘಟನೆ ಮತ್ತು ವ್ಯಕ್ತಿಗೆ ಸಂಬಂಧಿಸಿದ್ದ ಒಂದು ಚರಿತ್ರೆ ಐತಿಹ್ಯ ಪುರಾಣಗಳಲ್ಲಿ ಇಲ್ಲಿ ಮಿಶ್ರಣವಾಗಿವೆ.

ಇಲ್ಲಿ ಮಂಟೇಸ್ವಾಮಿ ಸಿದ್ದಪ್ಪಾಜಿಯನ್ನ ತನ್ನ ಶಿಷ್ಯನನ್ನಾಗಿ ಪಡೆದುಕೊಳ್ಳಲು ಹಲವಾರು ಮಾರಿ-ಮಸಣಿಯರನ್ನ ಆ ಊರಿನ ಒಳಗೆ ನುಗ್ಗಿಸಿ ಅಲ್ಲಿ ಹಲವಾರು ನಷ್ಟವನ್ನ ಮಾಡುತ್ತಾನೆ. ಹಾಗೆಯೆ ಅಲ್ಲ ಅವನು ತಾನೆ ದೈವವಾಗುತ್ತಾನೆ. ಇದು ಅಲ್ಲಿನ ಧಾರ್ಮಿಕ ಸಾಂಸ್ಕೃತಿಕ ರಾಜಕೀಯ ಸಂಘರ್ಷದ ಆಗಿರಬಹುದು. ಮತ್ತು ಎಲ್ಲಾ ಮಾರಿ-ಮಸಣಿಯರುಗಳನ್ನ ಸೆರೆಯಲ್ಲಿಡುವುದು ಇಲ್ಲಿ ಸಂಕೇತವಾಗಿದೆ.

ಮಂಟೇಸ್ವಾಮಿಯು ಆದಿ ದ್ರಾವಿಡ ಶೈವ ಸಂಸ್ಕೃತಿಯ ಪ್ರತಿನಿಧಿಯಾಗಿ ಕಾಣಿಸಿಕೊಳ್ಳುತಾನೆ. ಇಲ್ಲಿ ಸಿದ್ದಪ್ಪಾಜಿಯ ಜೊತೆ ಗೂಡಿ ಹಲಗೂರಿನ ಏಳು ಜನ ರಾಜರ ಪ್ರಾಬಲ್ಯ ಮುರಿಯಲು ಮಂಟೇಸ್ವಾಮಿ ತನ್ನ ಶಿಷ್ಯನಾದ ಸಿದ್ದಪ್ಪಾಜಿಯನ್ನೇ ಅಸ್ತ್ರವಾಗಿ ಬಳಸಿಕೊಳ್ಳುತ್ತಾನೆ. ಅಲ್ಲಿ ರಾಜರು ಬಳಸುತ್ತಿದ್ದ ಕಬ್ಬಿಣವನ್ನ ಭಿಕ್ಷೆಯನ್ನಾಗಿ ಪಡೆದು ತರಲು ಸಿದ್ದಪ್ಪಾಜಿಗೆ ಸೂಚಿಸುತ್ತಾನೆ. ಆಗ ಮಂಟೇಸ್ವಾಮಿ ತನ್ನದೆ ಆದ ಪಾರಂಪರಿಕ ತಾತ್ವಿಕ ನೆಲೆಯಿಂದಲೂ ಶೈವ ಸಿದ್ದಿಯಿಂದಲೂ ತನ್ನ ಸಮಕಾಲಿನ ಪಂಥಗಳ ವಿರುದ್ದಧ ಸಿಡಿದೆದ್ದ ಕಬ್ಬಿಣದ ಭಿಕ್ಷೆಯನ್ನ ಪಡೆದು ಮೇಲುಗೈ ಸಾಧಿಸುತ್ತಾನೆ. ಹಾಗೆಯೆ ಕಬ್ಬಿಣದ ಭಿಕ್ಷೆಯನ್ನ ತರಲು ಸಿದ್ದಪ್ಪಾಜಿಗೆ ಒಳಗೆ ಹೋಗುವುದು. ಅಲ್ಲಿ ಪವಾಡಗಳನ್ನ ಮಾಡಿ ಅವರನ್ನ ಗೆದ್ದು ಅವರನ್ನ ಶಿಷ್ಯರನ್ನಾಗಿ ಪಡೆದ ಮೇಲೆ ಸಿದ್ದಪ್ಪಾಜಿಯನ್ನ ಬೊಪ್ಪೇಗೌಡನ ಪುರದಲ್ಲಿ ನೆಲೆಗೊಳ್ಳುವಂತೆ ಮಾಡುವುದೇ ಒಂದು

ಗಮನಾರ್ಹ ಸಂಗತಿಯಾಗಿದೆ. ಮಂಟೇಸ್ವಾಮಿಯು ಒಬ್ಬ ಸಾಂಸ್ಕೃತಿಕ ದೈತ್ಯ ಪ್ರತಿಭೆ. ಸಾಂಸ್ಕೃತಿಕ ವೀರನಾಗಿ ಪವಾಡ ಪುರುಷನಾಗಿ ಬೈರಾಗಿಯಾಗಿ ಸಾಧಕನಾಗಿ ಮಂಟೇಸ್ವಾಮಿ ಸ್ಥಾಪಿತ ಮೌಲ್ಯಗಳ ವಿರುದ್ಧ ಹೋರಾಡಿದವನು.

ಮಂಟೇಸ್ವಾಮಿಯು ಪ್ರಧಾನ ಸಂಸ್ಕೃತಿಯ ಅಧೀನತೆಯನ್ನ ತಿರಸ್ಕರಿಸಿದ ಮತ್ತು ಅವನು ಪ್ರತಿ ಸಂಸ್ಕೃತಿಯೊಂದನ್ನ ಹುಟ್ಟು ಹಾಕಿದವನು. ದರ್ಪ, ಅಹಂಕಾರ ದೌರ್ಜನ್ಯಗಳ ಪ್ರತೀಕವಾಗಿದೆ ಕೆಂಪಚಾರಿಯನ್ನು ಸಿದ್ದಪ್ಪಾಜಿಯನ್ನಾಗಿ ಪರಿವರ್ತಿಸುವಲ್ಲಿ ಪವಾಡವನ್ನೇ ಮೆರೆದ.

"ಮಾರೆಹಳ್ಳಿ ಹಾಳಾಗಲಿ ಮಳವಳ್ಳಿ ಏಳಿಗೆಯಾಗಲಿ" ಎಂದು ಅಂದು ಕೊಟ್ಟ ಶಾಪ ಇಂದಿಗೂ ನಿಜವೇ ಆಗಿರುವುದು ಅಚ್ಚರಿಯ ಸಂಗತಿ. ಹಾಗೆಯೆ ಕುಂದೂರು ಗುಡ್ಡದ ಮೇಲೆ ಕುಳಿತು ಭಂಗಿ ಕುಡಿಯುವ ಆತ ಸಾಮಾನ್ಯರ, ಕೆಳವರ್ಗದವರ ಪ್ರತಿನಿಧಿಯಂತೆ ಕಾಣುತ್ತಾನೆ. ಮುಂದೆ ಪವಾಡದ ಮೂಲಕ ಕೆಲವರ್ಗದ ವೀರ ಪುರುಷನಾಗಿ ವರ್ಣಿಸಲ್ಪಟ್ಟಿರುವ ಈತ ಪವಾಡ ಪುರುಷನಾಗಿದ್ದಾನೆ.

ಪವಾಡಗಳನ್ನು ಮೆರೆದು ಆಳುವ ವರ್ಗವನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಂಡುದು ಈತನ ಮಹಿಮೆ ಮತ್ತು ಪ್ರಭುತ್ವದ ದಬ್ಬಾಳಿಕೆಯಿಂದ ನಲುಗಿದ ಜನತೆಯನ್ನು ಶಿಕ್ಷಿಸುವುದು ಆತನ ಸಾಮಾಜಿಕ ಅರಿವನ್ನ ತೋರಿಸುತ್ತದೆ.

ಹಲಗೂರಿನ ರಾಜರುಗಳು ಸಾಮಾಜಿಕವಾಗಿ ಆರ್ಥಿಕವಾಗಿ, ಉನ್ನತ ಮಟ್ಟದಲ್ಲಿದ್ದ ಪಾಂಚಾಳರು ಕಬ್ಬಿಣದ ಉತ್ಪಾದನೆಯನ್ನ ಏಕಸ್ವಾಮ್ಯವನ್ನ ಸಾಧಿಸಿ ಮೆರೆಯುತ್ತಿರುತ್ತಾರೆ. ಅವರ ಜೊತೆ ಸಂಘರ್ಷ ನಡೆಸಿ ಕಬ್ಬಿಣ ಭಿಕ್ಷೆ ಪಡೆದು ಶ್ರಮಿಕ ವರ್ಗಕ್ಕೆ ಸಮಾನವಾಗಿ ವಿತರಣೆ ಮಾಡುವ ಬಯಕೆಯೂ ಮಂಟೇಸ್ವಾಮಿಗೆ ಇದ್ದಿತೆಂದು ತೋರುತ್ತದೆ. ಶ್ರೀಮಂತರ ಅಟ್ಟಹಾಸ ಮೇಲ್ವರ್ಗದ ದೌರ್ಜನ್ಯಗಳನ್ನು ಮೆಟ್ಟಿ ಎಂತಹವರನ್ನ ಪರಿವರ್ತಿಸಿ ತನ್ನ ಧಾರ್ಮಿಕ ಪರಿಧಿಯ ತೆಕ್ಕೆಗೆ ತೆಗೆದುಕೊಳ್ಳುವ ರೀತಿ ಅತ್ಯಂತ ರೋಮಾಂಚನವಾಗಿದೆ. ಮಂಟೇಸ್ವಾಮಿಯ ಸಾಂಸ್ಕೃತಿಕ ಚರಿತ್ರೆಯನ್ನು ಗಮನಿಸಿದರೆ ಆತ ಒಬ್ಬ ಸೌಹಾರ್ದಯುತ ಶೈವ ದೇವತೆಯಾಗಿ ಕಾಣುತ್ತಾನೆ. ವೈದಿಕ ಸ್ವಭಾವಗಳನ್ನ ಮೈಗೂಡಿಸಿಕೊಂಡು ಮಂಟೇಸ್ವಾಮಿ ವೀರಶೈವ ಮಠಗಳಿಂದ ದೂರು ನಿಲ್ಲುತ್ತಾನೆ. ಅವೈದಿಕ, ನಾದಸಿದ್ದ ತನಗಳ ತಾನು ನೆಲೆ ನಿಲ್ಲಲು ಬಂದು ಆಸುಪಾಸಿನ ಪಂಥ-ಸಂಸ್ಕೃತಿಗಳ ಜೊತೆ ಸೌಹಾರ್ದ ನೀತಿ ಅನುಸರಿಸುತ್ತಾನೆ. ರಾಚಪ್ಪಾಜಿ ಧರೆಗೆ ದೊಡ್ಡಮ್ಮ ಫಲಾರಧಯ್ಯ, ಮೊದಲಾದವರ ಜೊತೆ ಇವನು ನಡೆದುಕೊಳ್ಳುವುದರಲ್ಲಿ ಸ್ನೇಹ ಮತ್ತು ಹೊಂದಾಣಿಕೆ ನೀತಿಯನ್ನ ಕಾಣಬಹುದು ಹಾಗೆಯೆ ಮಂಟೇಸ್ವಾಮಿ ಸೌಹಾರ್ದತವಾಗಿ ತನ್ನ ಸಮಕಾಲಿನ ಪಂಥ ಪರಂಪರೆಗಳ ಜೊತೆ ನಡೆದುಕೊಳ್ಳುತ್ತಾನೆ.

ಮಂಟೇಸ್ವಾಮಿ ಮತ್ತು ಮಾದೇಶ್ವರರು ಇವರಿಬ್ಬರನ್ನು ಒತ್ತೊಟ್ಟಿಗೆ ನೋಡುತ್ತಾ ಬಂದಿದ್ದೇವೆ. ಎರಡು ಗುರು ಪರಂಪರೆಗಳು ಒಂದಕ್ಕೊಂದು ಪೂರಕವಾಗಿ ಕಂಡರು ಆಚರಣೆಗಳಲ್ಲಿ ವ್ಯತ್ಯಾಸಗಳಿವೆ. ಮಾದೇಶ್ವರರ ಗುಡ್ಡಕಾರ ಕಂಸಾಳೆ ಗಾಯರಿಗೂ, ಮಂಟೇಸ್ವಾಮಿ ದೇವರ ಗುಡ್ಡರಾದ ನೀಲಗಾರರಿಗೂ ಅನೇಕ ವ್ಯತ್ಯಾಸಗಳಿವೆ.

ಮಾದೇಶ್ವರ ಮತ್ತು ಮಂಟೇಸ್ವಾಮಿ ಇಬ್ಬರು ಉತ್ತರ ದೇಶದಿಂದ ಕತ್ತಲೆ ರಾಜ್ಯಕ್ಕೆ ಬಂದವರು ಈ ಇಬ್ಬರು ನಾಯಕರು ಕೆಳವರ್ಗದಿಂದ ಬಂದವರೇ ಆಗಿರುತ್ತಾರೆ ಏಕೆಂದರೆ ಈಗಲು ಅಸ್ತಿತ್ವದಲ್ಲಿರುವ ಈ ಪಂಥಗಳ ಗುಡ್ಡರ ಸಂಪ್ರದಾಯಗಳು ಹಾಗೂ ಅವರ ಆಚರಣೆಗಳು ಈ ವಾದಕ್ಕೆ ಪುಷ್ಠಿ ನೀಡುತ್ತವೆ. ಆದರೂ ಇವರಿಬ್ಬರ ಹುಟ್ಟಿನ ಬಗ್ಗೆ ಜಾತಿಯ ಬಗ್ಗೆ ಅನೇಕ ವಿವಾದಗಳಿವೆ. ಇವರನ್ನೂ ಎಲ್ಲಾ ಜಾತಿಯವರ ಶೂದ್ರ ವರ್ಗದಿಂದ ಬಂದಂತ ಮಹಾಯೋಗಿಗಳೆಂದೆ ಆರಾಧಿಸುತ್ತಿದ್ದಾರೆ. ಅರಣ್ಯ ವಾಸಿಗಳಾಗಿ ಬೈರಾಗಿಗಳಾಗಿ ಕೇವಲ ಹೊಟ್ಟೆ ಹೊರೆಯುವ ಸಂನ್ಯಾಸಿಗಳಾಗಿರಲಿಲ್ಲ. ಪಟ್ಟಭದ್ರ ಸಂಸ್ಕೃತಿಗೆ ವಿರುದ್ಧವಾದ ಕೆಳವರ್ಗಗಳು ಅಸ್ತಿತ್ವವನ್ನ ಪುನರ್ ಸ್ಥಾಪಿಸುವ ಪ್ರತಿ ಸಂಸ್ಕೃತಿಯೊಂದರೆ ನಿರ್ಮಾಣ ಇವರ ಗುರಿಯಾಗಿತ್ತೆಂದು ತೋರುತ್ತದೆ. ಈ ಉದ್ದೇಶದಿಂದಲೇ ಈ ಇಬ್ಬರೂ ಆರಿಸಿಕೊಂಡಿರುವುದು ಬುಡಕಟ್ಟುಗಳ ಮತ್ತು ಶೂದ್ರಾತಿ ಶೂದ್ರರ ಅಧಿಕವಾಗಿರುವ ಕರ್ನಾಟಕದ ದಕ್ಷಿಣ ಭಾಗದಲ್ಲಿ ಇವರುಗಳ ಗುರು ಪೀಠಗಳು ಗದ್ದಿಗೆಗಳು ಹೆಚ್ಚಾಗಿರುತ್ತವೆ. ಮತ್ತು ಮಂಟೇಸ್ವಾಮಿ ಮತ್ತು ಮಾದೇಶ್ವರರ ಕಾಲಮಾನಗಳು ೨–೩ ಶತಮಾನಗಳ ಅಂತರದಿಂದ ಕಂಡು ಬರುತ್ತದೆ.

ಖಂಡಾಯ ಧರೆಗೆ ದೊಡ್ಡವರ ಖಂಡಾಯ, ಮಂಟೇಸ್ವಾಮಿ ಖಂಡಾಯ, ಕುರುಬನಕಟ್ಟೆ ಚೆನ್ನಯ್ಯ–ಲಿಂಗಯ್ಯನವರ ಖಂಡಾಯ, ಘನನೀಲಿ– ಸಿದ್ದಪ್ಪಾಜಿಯವರ ಖಂಡಾಯಕ್ಕೆ ಜಯವಾಗಲಿ ಎಂದು ಭಕ್ತರು ಖಂಡಾಯ ಕಂಡು ಪೂಜಿಸುತ್ತಾರೆ. ಮಂಡ್ಯ ಚಾಮರಾಜನಗರ ಹಾಗೂ ಮೈಸೂರು ಜಿಲ್ಲೆಯಲ್ಲಿರುವ ದೇವರ ಒಕ್ಕಲುಗಳು ಮತಬೇಧ, ಮರೆತು ಮಂಟೇಸ್ವಾಮಿ ಪರಂಪರೆಯಲ್ಲಿ ಸಪ್ತ ಮಠಗಳ ಆರಾಧಕರಾಗಿರುತ್ತಾರೆ.

"ಖಂಡ ಎಂದರೆ ತುಂಡು, ಖಂಡೆ ಎಂದರೆ ಕತ್ತಿ, ಖಡ್ಗ. ಒಂದು ಬಗೆಯ ಆಯುಧ ಎಂತಲು ಅರ್ಥಕೋಶದಲ್ಲಿ ಉಲ್ಲೇಖಿಸಲಾಗಿರುತ್ತದೆ". ಅಂದರೆ ಒಂದು ಮಠದ ನೇರವಾದ ತುಂಡಿಗೆ ಭರ್ಜಿರೂಪ (ಈಟಿ) ಕಬ್ಬಿಣ ಅಥವಾ ಹಿತ್ತಾಳೆಯ ಮೊನಚದ ಸಲಾಕಿಯನ್ನ ತೊಡಿಸಿರುವುದಕ್ಕೆ ಖಂಡಾಯ ಎಂದು ಕರೆಯಲ್ಪಡುತ್ತಾರೆ. ಈಟಿ ಅರ್ಥಾತ್ ಶಲ್ಯ ಶೂಲ ಚೂಪಾದ ತುದಿಯುಳ್ಳ ಒಂದು ಬಗೆಯ ಆಯುಧ (ತ್ರಿಶೂಲ) ತಿವಿದು ಚುಚ್ಚುವುದು ಮುಂತಾಗಿ ಸ್ವಯಂರಕ್ಷಣೆ ಮಾಡಿಕೊಳ್ಳಲು ಬಳಸುವ ಸಾಧನವಾಗಿರುತ್ತವೆ. ಭಾರತ ಭೂಮಿಯಲ್ಲಿ ಶಿವನ ಹಿಡಿದಿರುವ ತ್ರಿಶೂಲವೇ ಪುರಾಣ

ಪ್ರಸಿದ್ಧವಾದ ಮೂಲವಾಗಿರುತ್ತದೆ. ಶಿವನನ್ನ ಆರಾಧಿಸುವ ಶೈವರು ವೀರಶೈವರು ತ್ರಿಶೂಲ ಪೂಜಾ ಪಂಥದವರಾಗಿರುತ್ತಾರೆ. ಇವರು ಈ ಭಾರತದ ಮೂಲ ನಿವಾಸಿಗಳಾಗಿರುತ್ತಾರೆ. ಶಿವನು ಸ್ಮಶಾನವಾಸಿಯಾಗಿ ಕಾಡು ಮೇಡುಗಳಲ್ಲಿ ಸಂಚರಿಸುವಲ್ಲಿ ತನ್ನ ರಕ್ಷಣೆಗಾಗಿ ತ್ರಿಶೂಲವನ್ನ ಬಳಸುತ್ತಿದ್ದನು. ಈತನ ಕೈ ಸ್ಪರ್ಶದಿಂದ ದೈವತ್ತ್ವವನ್ನು ಪಡೆದು ಪೂಜಾರ್ಹವಾಗಿರುತ್ತದೆ ತ್ರಿಶೂಲ ಅರ್ಥಾತ್ ಖಂಡಾಯವಾಗಿದೆ.

ಹಾಗೆಯೇ ತ್ರಿಮೂರ್ತಿಗಳನ್ನ ಸೃಷ್ಠಿಸಿ ತನ್ನ ಶಕ್ತಿಯನ್ನು ಮೂರು ಭಾಗವಾಗಿ ಮಾಡಿ ಬ್ರಹ್ಮ, ವಿಷ್ಣು ಶಿವನಿಗೆ ಈ ತ್ರಿಶೂಲವನ್ನ ನೀಡಿರುವುದು ಪುರಾಣದಲ್ಲಿ ತಿಳಿದು ಬರುತ್ತದೆ. ನಂತರ ಶೈವ ಮತದ ದಾರ್ಶನಿಕರು, ಋಷಿಗಳು, ಮುನಿಗಳು ತ್ರಿಶೂಲದಾರಿಗಳಾಗಿ ಭಾರತದಲ್ಲಿ ಸಂಚರಿಸಿ ತಮ್ಮ ಕಾಯಕ ನಡೆಸಿರುತ್ತಾರೆ ಅಂತೆಯೇ ಹನ್ನೆರಡು ಭಾರಿ ಕನ್ನಡನಾಡನ್ನು ಸುತ್ತಾಡಿದ ಅಲ್ಲಮ ಮಹಾಪ್ರಭುಗಳು ದಕ್ಷಿಣ ಕನ್ನಡ ನಾಡಿನ ಕಡೆ ಭಾಗದ ತಮಿಳುನಾಡಿನ ಅಂಜಾನಲ್ಲಿ ಕಾವೇರಿ ನದಿ ಹರಿಯುವ ಪುಣ್ಯ ಕ್ಷೇತ್ರಗಳಲ್ಲಿ ಸಂಚರಿಸಿ ತಮ್ಮ ಪವಾಡ ಮಹಿಮೆಗಳನ್ನು ತೋರಿಸಿ ಇಲ್ಲಿ ಸಪ್ತ ಗುರು ಮಠಗಳನ್ನು ಸ್ಥಾಪಿಸಿ ಧರೆಗೆ ದೊಡ್ಡವರು, ಶ್ರೀ ಮಂಟೇಸ್ವಮಿ ಎಂದು ಖ್ಯಾತಿಗೊಂಡಿದ್ದಲ್ಲದೆ "ನೀಲಗಾರರು" ಎಂಬ ಶೈವ ಪಂಥವನ್ನ ಹುಟ್ಟಿ ಹಾಕಿರುವುದು ಗುರುತರವಾಗಿ ಕಂಡು ಬರುತ್ತದೆ. ಶ್ರೀಯವರು ಹಿಡಿದಿದ್ದ ತ್ರಿಶೂಲಕ್ಕೆ ಖಂಡಾಯ ಎಂದು ನಾಮಾಂಕಿತವನ್ನು ಮಾಡಿರುತ್ತಾರೆ. ಆದುದರಿಂದ ಈ ದೇವರ ಒಕ್ಕಲುತನದವರು ಇಂತಹ ಖಂಡಾಯದ ಒಡೆಯನ ನಿಜ ನಿಜಭಕ್ತರಾದ ಕುರುಬನಕಟ್ಟೆ ಚೆನ್ನಯ್ಯ ಲಿಂಗಯ್ಯ ಹಾಗೂ ಚಿಕ್ಕಲ್ಲೂರಿನ ಘನ ನೀಲಿ ಸಿದ್ದಪ್ಪಾಜಿ ಇವರುಗಳನ್ನ ಸಹ ಪರಂಪರೆಯಾಗಿ ಖಂಡಾಯ ಧಾರಿಗಳಾಗಿ ಗುರುತಿಸಿ ಪೂಜಿಸುತ್ತಾರೆ. ಹೀಗೆ ತ್ರಿಶೂಲಕ್ಕೆ ಇಲ್ಲಿ ಖಂಡಾಯವೆಂದು ಇಂದು ಪ್ರಸಿದ್ಧವಾಗಿದೆ. ಖಂಡಾಯಗಳು ಒಂದು ಅಡಿಯಿಂದ ಹಿಡಿದು ಹನ್ನೆರಡು ಅಡಿ ಎತ್ತರದವರೆಗೆ ಈ ಖಂಡಾಯಗಳು ಅಲ್ಲಲ್ಲಿ ದೇವಸ್ಥಾನಗಳಲ್ಲಿ ನಿರ್ಮಾಣಗೊಂಡ ಚಿನ್ನ-ಬೆಳ್ಳಿ ತಾಮ್ರಗಳ ತಗಡು ಪಟ್ಟಿಗಳ ಓಲೆಗಳನ್ನ ಹೊಂದಿರುತ್ತದೆ. ಒಂದು ಗುರುತರವಾದ ಕಾಡಿನಲ್ಲಿ ದೊರೆಯುವ ಮರದ ತುಂಡಿನಿಂದ ಇದನ್ನು ವಿಶೇಷ ಪೂಜಾ ವಿಧಾನಗಳು ಮಡಿವಂತಿಕೆಯಿಂದ ತಯಾರು ಮಾಡಿ ಹೋಮ ನಿಯಮಗಳೊಡನೆ ಪ್ರತಿಷ್ಠಾಪನೆ ಮಾಡುತ್ತಾರೆ.

ಹಬ್ಬ ಹರಿದಿನಗಳಲ್ಲಿ ಜಾತ್ರೆ ವಿಶೇಷತೆಗಳಲ್ಲಿ ಗೃಹಪ್ರವೇಶ ಮುಂತಾದ ಶುಭ ಕಾರ್ಯಗಳಲ್ಲಿ ಮೆರವಣಿಗೆಯಲ್ಲಿ ಪೂಜಿಸಿ ಮೇಲೆ ಹೇಳಿದ ಉತ್ಸವಗಳಲ್ಲಿ ಹೊರಗೆ ತರುತ್ತಾರೆ. ಈ ಖಂಡಾಯಗಳನ್ನು ಹೊತ್ತು ನಡೆಯುವವರು ಪೂಜಾರಿಗಳಾಗಿರುತ್ತಾರೆ. ಆದರೆ ಉಳಿಕೆ ಸಾಮಾನ್ಯ ನೀಲಗಾರರು ಪ್ರತಿಯೊಬ್ಬರು ದೀಕ್ಷೆ ಪಡೆದ ನಂತರ

ಖಂಡಾಯದ ಪ್ರತಿರೂಪವಾಗಿ "ನಾಗಬೆತ್ತ" ವನ್ನ ಹಿಡಿದು ಜಾಗಟೆ ಬಾರಿಸಿ ಪೂಜಿಸುವರು ರೂಢಿಯಲ್ಲಿದೆ.

ಇದೇ ರೀತಿ ಮಂಟೇಸ್ವಾಮಿ ಪರಂಪರೆಯು ಹೋಲಿಕೆಯಂತೆಯೇ ಮಹದೇಶ್ವರರ ದೇವರ ಗುಡ್ಡರು ನಾಗಬೆತ್ತ ಹಿಡಿದು ಜಾಗಟೆ ಬದಲು ಕಂಸಾಳೆಯನ್ನ ನುಡಿಸುತ್ತ ಪೂಜೆ ಮಾಡುವುದು ರೂಢಿಯಲ್ಲಿರುವುದು ಗಮನಿಸಿದಾಗ ಈ ಎರಡು ದೇವರು ಒಂದೇ ಜನಾಂಗದ ಮೂಲವನ್ನವುದರಲ್ಲಿ ಸಂಶಯವಿಲ್ಲ ಇಬ್ಬರೂ ಪವಾಡ ಪುರುಷರಾಗಿ ಹಿಂದುಳಿದವರು ಶೂದ್ರ ಅತಿಶೂದ್ರ ಜನಾಂಗದ ಇಷ್ಟ ದೇವರಾಗಿ ಗುರುತಿಸಿಕೊಂಡಿರುತ್ತಾರೆ. ಮಾದಪ್ಪ ಗುಡ್ಡರು ಹಾಗೂ ಮಂಟೇಸ್ವಾಮಿ ನೀಲಗಾರರಲ್ಲಿ ಕೆಲವರು ಕಥೆಗಳನ್ನು ಕಂಠಪಾಠ ಮಾಡಿ ಇಬ್ಬರ ಚರಿತ್ರೆಗಳನ್ನು ಜಾತ್ರೆ ವಿಶೇಷ ಸಮಾರಂಭಗಳಲ್ಲಿ ಕಥೆ ಮಾಡುತ್ತಾರೆ. ಮತ್ತು ಜೊತೆಗೆ ಇವರುಗಳು ಭಂಗಿ ಸೇವನೆಯನ್ನ ಕೂಡ ಮಾಡುತ್ತಾರೆ.

## <u>ಅಡಿಟಿಪ್ಪಣಿಗಳು</u> :-

೧) ಮಹಾದೇವ ಶಂಕನಪುರ – ಮಲೆ ಮಾದಯ್ಯನ ಸಾಂಸ್ಕೃತಿಕ ಚರಿತ್ರೆ – ಪುಟ ೧.

೨) ಮಹಾದೇವ ಶಂಕನಪುರ – ಮಲೆ ಮಾದಯ್ಯನ ಸಾಂಸ್ಕೃತಿಕ ಚರಿತ್ರೆ – ಪುಟ ೨.

೩) ಮ.ಸಿ. ನಾರಾಯಣ ಆದಿ ಜಾಂಬವ ಸಂತರು – ಪುಟ ೩೨.

## ಅಧ್ಯಾಯ – ೪

**ಆಶಯಗಳು :-**

ಮಂಟೇಸ್ವಾಮಿ ಕಾವ್ಯವನ್ನ ಸಾಂಸ್ಕೃತಿಕವಾಗಿ ಅಧ್ಯಯನ ಮಾಡಿದಾಗ ವ್ಯವಸ್ಥಿತವಾದ ಪಿತೂರಿಯಿಂದ ಬಲಗೊಂಡಿರುವ ಪುರೋಹಿತಶಾಯಿ ವ್ಯವಸ್ಥೆಯ ಅಡಿಪಾಯವನ್ನು ಅಲುಗಾಡಿಸಿ ಕೊಡುವುದು ಮತ್ತು ವೈದಿಕರು ಯಾವುದನ್ನು ಶ್ರೇಷ್ಠವೆಂದು ಯಾವುದನ್ನು ಕನಿಷ್ಠವೆಂದು ಪರಿಗಣಿಸಿದ್ದರೋ ಅದನ್ನು ವಿರುದ್ಧವಾದ ದಿಕ್ಕಿನಲ್ಲಿ ಪರ್ಯಾಯವಾಗಿ ನೋಡುವುದು ಈ ಅಧ್ಯಯನದ ಆಶಯಗಳಲ್ಲಿ ಒಂದಾಗಿದೆ.

ಈ ಹಿನ್ನೆಲೆಯಲ್ಲಿ ವೈದಿಕ ಸಂಸ್ಕೃತಿಯ ನಿಕಾರಣೆ ಮಾಡುತ್ತಾ ಶ್ರಮಿಕರ ಕ್ರಮಕ್ಕೆ ಬೆಲೆಕೊಟ್ಟು ಅವರನ್ನು ಶ್ರೇಷ್ಠತೆಯ ಕಡೆಗೆ ಕೊಂಡೊಯ್ಯುವುದು. ಆ ಮೂಲಕ ಭಾರತೀಯ ಸಂಸ್ಕೃತಿಯ ಒಳಗೆ ನೆಲೆಗೊಂಡಿರುವ ಅಸಮಾನತೆಯನ್ನ ಹೋಗಲಾಡಿಸುವುದು. ದಲಿತರ, ಶೋಷಿತರ, ಬಡವರ, ಅಲಕ್ಷಿತರ, ಅನಕ್ಷರಸ್ಥರ, ಬದುಕಿಗೆ ಒಂದು ಆಶಾಕಿರಣವಾಗಿ ಸ್ಫೂರ್ತಿಯ ನೆಲೆಯಾಗಿ ಆ ತಳ ವರ್ಗಕ್ಕೆ ಸ್ಥಾನಮಾನಗಳನ್ನು ಕಲ್ಪಿಸಿಕೊಡುವುದು.

ಮಂಟೇಸ್ವಾಮಿ ಮತ್ತು ಮಾದೇಶ್ವರ ಇವರಿಬ್ಬರೂ ಸಹ ಉತ್ತರ ದೇಶದಿಂದ ದಕ್ಷಿಣಕ್ಕೆ ಬಂದು ಇಲ್ಲಿ ನೆಲೆಯಾಗಿ ಈ ಒಂದು ಪ್ರದೇಶದಲ್ಲಿ ಹಲವಾರು ಶಿಷ್ಯರನ್ನು ಪಡೆದು ಆ ಶಿಷ್ಯರಿಂದ ಜನರಿಗೆ ಒಳ್ಳೆಯದನ್ನು ಮಾಡಿಸುತ್ತಾ ಅವರನ್ನು ಸಹ ಒಂದೊಂದು ಸ್ಥಳದಲ್ಲಿ ನೆಲೆಯೂರಿಸಿ ಅಲ್ಲಿಯ ಜನರಿಗೆ ಒಳ್ಳೆಯದನ್ನು ಮಾಡುತ್ತಾರೆ. ಹಾಗೆಯೆ ಮಂಟೇಸ್ವಾಮಿಯು ಸಹ ಎಲ್ಲಾ ವರ್ಗಕ್ಕೆ ಸಮವಾದ ಸ್ಥಾನಮಾನಗಳನ್ನು ಕೊಡಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಾರೆ. ಪ್ರೊ. ಹಿ.ಚಿ. ಬೋರಲಿಂಗಯ್ಯನವರ ಮಂಟೇಸ್ವಾಮಿ ಕಾವ್ಯವನ್ನ ಅಧ್ಯಯನಕ್ಕೆ ಒಳಪಡಿಸಿ ಕೊಂಡಾಗ ಅದರಲ್ಲಿರುವ ಸಂಸ್ಕೃತಿಯ ಬಗ್ಗೆ ತಿಳಿದುಕೊಂಡು. ಇದರಲ್ಲಿ ಈಗಿನ ಸಮಾಜಕ್ಕೆ ಒಳ್ಳೆಯ ಸಂದೇಶವನ್ನು ನೀಡುವಂತಹ ಅಂಶಗಳನ್ನು ಬಹಳವಾಗಿ ಒಳಗೊಂಡಿರುತ್ತವೆ.

ಈ ಕಾವ್ಯದಲ್ಲಿ ನಾವು ಶ್ರೀಮಂತಿಕೆಯ ದಬ್ಬಾಳಿಕೆ ಮತ್ತು ಅವರು ಆಚರಿಸಿಕೊಂಡು ಬರುತ್ತಿದ್ದ ಸಂಪ್ರದಾಯಗಳು ಮತ್ತು ಸಂಸ್ಕೃತಿಯ ಬಗ್ಗೆ ಬಹಳವಾಗಿ ಅಧ್ಯಯನ ಮಾಡಿ ಅದರಲ್ಲಿ ನಾವು ಶ್ರೀಮಂತಿಕೆಯನ್ನು ಹೇಗೆ ನಿಯಂತ್ರಿಸುವುದು ಆ ಶ್ರೀಮಂತಿಕೆಗೆ ಕಡಿವಾಣ ಹಾಕುವುದರ ಬಗ್ಗೆ ಬಹಳವಾಗಿ ನಾವು ಅಧ್ಯಯನ ಮಾಡುವಂತಹ ಒಂದು ಕಾವ್ಯದ ರೂಪದಲ್ಲಿ ಅದನ್ನು ನಾವು ಮನಗಂಡಿದ್ದೇವೆ.

ಮಂಟೇಸ್ವಾಮಿಯು ಶ್ರೀಮಂತಿಗೆಗೆ ಕಡಿವಾಣ ಹಾಕುವುದನ್ನ ಪವಾಡದ ಮೂಲಕ ತೋರಿಸಿಕೊಟ್ಟಿರುವುದನ್ನು ನಾವು ಮನಗಂಡಿದ್ದೇವೆ ಮತ್ತು ಶ್ರೀಮಂತಿಕೆಯ ದಬ್ಬಾಳಿಕೆಯನ್ನು ಕೊನೆಗಾಣಿಸಿ ಅವರನ್ನೇ ಶಿಷ್ಯರನ್ನಾಗಿ ಪಡೆದುಕೊಂಡಿರುವುದು ಮಂಟೇಸ್ವಾಮಿಯ ಒಂದು ಪವಾಡವೇ ಸರಿ.

ಮಂಟೇಸ್ವಾಮಿಯು ಇಂತಹವರನ್ನು ಮಟ್ಟ ಹಾಕುವುದಕೋಸ್ಕರ ಸಿದ್ದಪ್ಪಾಜಿಯನ್ನು ಶಿಷ್ಯನನ್ನಾಗಿ ಪಡೆದುಕೊಂಡು ಅವನ ಮುಖಾಂತರ ಸಮಾಜಕ್ಕೆ ಒಂದು ಒಳ್ಳೆಯ ಸಂದೇಶವನ್ನೆ ನೀಡಲು ಮುಂದಾಗುತ್ತಾನೆ. ಇದರಿಂದ ಸಿದ್ದಪ್ಪಾಜಿಯು ಸಹ ಶ್ರೀಮಂತಿಕೆಯ ದಬ್ಬಾಳಿಕೆಯಿಂದ ನೊಂದು-ಬೆಂದು ಹೋಗುತ್ತಾನೆ. ಮಂಟೇಸ್ವಾಮಿ ಕಾವ್ಯವು ಹಿಂದೂ ಧರ್ಮವನ್ನು ಎತ್ತಿ ತೋರಿಸುವ ಕೆಲಸವನ್ನು ಮಾಡುತ್ತದೆ. ಏಕೆಂದರೆ ಹಿಂದೂ ಧರ್ಮದಲ್ಲಿಯು ಕನಿಷ್ಠ ಎಂಬುದು ತಾಂಡವ ಮಾಡುತ್ತಿರುವುದನ್ನೆ ಮನಗಂಡ ಮಂಟೇಸ್ವಾಮಿಯು ಈ ಕನಿಷ್ಠತೆಯನ್ನು ಶ್ರೇಷ್ಠತೆಯನ್ನಾಗಿ ಮಾಡುವ ಅಚಲ ಗುರಿಯನ್ನು ಮಂಟೇಸ್ವಾಮಿ ತನ್ನ ಕಾವ್ಯದ ಮೂಲಕ ಮಾಡಿ ತೋರಿಸಿದ್ದಾನೆ.

ಈ ಕಾವ್ಯವು ಬಹಳ ಉತ್ತಮವಾಗಿ ಬೆಳೆದು ಬಂದು ಜನಪದ ಕಾವ್ಯವಾಗಿ ಹೊರಹೊಮ್ಮಿ ಸಮಾನತೆ ದಿಕ್ಕಿನ ಕಡೆಗೆ ಸಾಗುತಿದೆ. ಆದುದರಿಂದ ಮಂಟೇಸ್ವಾಮಿ ಮಹಾಕಾವ್ಯವು ಮಾಹಿತಿಯನ್ನು ಒಂದು ಜನರಿಗೆ ಆದರ್ಶವಾಗಿ ನೀತಿಯನ್ನು ಉಂಟು ಮಾಡುವ ಒಂದು ಜನಪದ ಮಹಾಕಾವ್ಯವಾಗಿ ಹೊರ ಹೊಮ್ಮಿ ಜನರಿಗೆ ಹೊಸ ಹೊಸ ಸಂಪ್ರದಾಯದ ಬಗ್ಗೆ ತಿಳುವಳಿಕೆಯನ್ನ ನೀಡುವಂತಹ ಒಂದು ಕಾವ್ಯವಾಗಿದೆ.

ಈ ಕಾವ್ಯದಲ್ಲಿ ಮಂಟೇಸ್ವಾಮಿಯು ಕೆಂಪಚಾರಿಯನ್ನು ಸಿದ್ದಪ್ಪಾಜಿಯನ್ನಾಗಿ ಪರಿವರ್ತನೆ ಮಾಡುವುದು ಕಾವ್ಯದ ದೃಷ್ಠಿಯಿಂದ ಸಾಂಸ್ಕೃತಿಕವಾದ ಕಾಲಘಟ್ಟಗಳ ದೃಷ್ಠಿಯಿಂದ ಬಹಳ ಮುಖ್ಯವಾಗುತ್ತದೆ. ಪಾಂಚಾಳ ಜನವರ್ಗವನ್ನು ತನ್ನ ಪರಿಧಿಗೆ ಸೇರಿಸಿಕೊಳ್ಳುವ ಮೂಲಕ ಕಬ್ಬಿಣ ಉತ್ಪಾದಿಸುವ ವರ್ಗವೊಂದನ್ನು ಒಲಿಸಿಕೊಳ್ಳುವುದು ಮಂಟೇಸ್ವಾಮಿಯ ಅಪೇಕ್ಷೆ ಇದ್ದಂತೆ ಕಾಣುತ್ತದೆ. ಅವನು ಕೇಳುವ ಕಬ್ಬಿಣದ ಭಿಕ್ಷೆ ತೀರಾ ಸಾಂಕೇತಿಕವಾಗಿದೆ. ಅದರಂತೆ ಪಾಂಚಾಳದವರನ್ನು ಕಬ್ಬಿಣದ ಭಿಕ್ಷೆಯನ್ನು ಸಿದ್ದಪ್ಪಾಜಿಗೆ ಕೊಡದೆ ಅವನನ್ನು ಬಹಳವಾಗಿ ಹಿಂಸೆ ಕೊಡುವುದು. ಇದನ್ನು ಮಂಟೇಸ್ವಾಮಿ ಸಹಿಸದೆ ಪಾಂಚಾಳದವರಿಗೆ ಕಷ್ಟಗಳನ್ನು ಕೊಟ್ಟು ಅವರಿಂದ ಕಬ್ಬಿಣದ ಭಿಕ್ಷೆ ಪಡೆಯುವುದು ಮತ್ತು ಅವರನ್ನು ತನ್ನ ಶಿಷ್ಯರನ್ನಾಗಿ ಪಡೆಯುವುದು ಈ ಕಾವ್ಯದ ಉದ್ದೇಶವಾಗಿದೆ.

ಈ ಮಂಟೇಸ್ವಾಮಿ ಕಾವ್ಯವನ್ನ ನಾವು ಬಹಳ ಸ್ಥೂಲವಾಗಿ ಗಮನಿಸಿದಾಗ ಸಂಸ್ಕೃತಿಗೆ – ಪ್ರತಿಸಂಸ್ಕೃತಿಯನ್ನು ತೋರಿಸಿ ಕೊಡುವುದು ಕಾವ್ಯದ ಆಶಯವಾಗಿದೆ.

# ಅಧ್ಯಾಯ – ೫

**ಉಪಸಂಹಾರ :-**

ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯ ಮುಂದುವರೆದ ಭಾಗವೆ ಉಪಸಂಹಾರ.

ಮಂಟೇಸ್ವಾಮಿ ಕಾವ್ಯವು ಜನಪದೀಯ ಒಂದು ಮಹಾಕಾವ್ಯ. ಮಂಟೇಸ್ವಾಮಿ ಕಾವ್ಯದಲ್ಲಿ ನಾವು ಸಂಸ್ಕೃತಿಗೆ–ಪ್ರತಿಸಂಸ್ಕೃತಿಯನ್ನು ಕಂಡುಕೊಂಡಿದ್ದೇವೆ. ಮತ್ತು ಈ ಕಾವ್ಯವು ಬಹಳ ವಿಸ್ತಾರವಾಗಿದ್ದು ಹಲವಾರು ವಿಷಯಗಳನ್ನು ನಾವು ಸಂಶೋಧನೆಯ ಮೂಲಕ ಕಂಡುಕೊಳ್ಳಲು ಸಾಧ್ಯವಾಯಿತು.

ಮಂಟೇಸ್ವಾಮಿಯವರು ಉತ್ತರ ದೇಶದಿಂದ ದಕ್ಷಿಣಕ್ಕೆ ಬಂದು ಇಲ್ಲಿ ಹಲವಾರು ಪವಾಡಗಳನ್ನ ಮಾಡಿ ಇಲ್ಲಿ ಶ್ರೀಮತಂತ ವರ್ಗಕ್ಕೆ ಮಾರಕನಾಗಿ ಪರಿಣಮಿಸುತ್ತಾನೆ. ಹಾಗೆಯೆ ಇಲ್ಲಿ ಮಂಟೇಸ್ವಾಮಿಯು ಹಲವಾರು ಪವಾಡಗಳನ್ನು ಗೆದ್ದು – ಹಲವಾರು ಶಿಷ್ಯರನ್ನ ಪಡೆದುಕೊಂಡು, ಹೊಗೆಸೊಪ್ಪಿನ ಭಂಗಿಯನ್ನ ಸೇವಿಸುವುದು ಒಂದು ಪವಾಡವೇ ಸರಿ.

ಈ ಕಾವ್ಯದಲ್ಲಿ ನಾವು ಸಾಂಸ್ಕೃತಿಕವಾಗಿ ಅಧ್ಯಯನ ಮಾಡಿ ನೋಡಿದಾಗ ಪುರೋಹಿತ ಶಾಯಿಯ ದಬ್ಬಾಳಿಕೆಯನ್ನು ಅಲುಗಾಡಿಸಿದ ಒಬ್ಬ ಮಹಾನ್ ವ್ಯಕ್ತಿಯಾಗಿದ್ದಾನೆ. ಇದನ್ನು ನಾವು ಈ ಕಾವ್ಯದಲ್ಲಿ ಕಂಡುಕೊಂಡಿದ್ದೇವೆ. ಮತ್ತು ಬಸವಣ್ಣನನ್ನ ಪರೀಕ್ಷೆ ಮಾಡಿ ಅಲ್ಲಿನ ಡಾಂಭಿಕ ಭಕ್ತರನ್ನು ಹೊರದೂಡುವುದು ಇವರ ಒಂದು ಮಹತ್ವದ ಹೆಜ್ಜೆಯಾಗಿರುತ್ತದೆ. ಹಾಗೆಯೆಇವನು ಕುಷ್ಟ ರೋಗಿಯಾಗಿ ಕಲ್ಯಾಣ ಪಟ್ಟಣಕ್ಕೆ ಪ್ರವೇಶಿಸುವ ಒಂದು ಪ್ರಸಂಗ ಅಡಗಿದೆ. ಮಾದೇಶ್ವರರನ್ನು ಮತ್ತು ಮಂಟೇಸ್ವಾಮಿಯವರನ್ನು ನಾವು ಒಟ್ಟೊಟ್ಟಿಗೆ ನೋಡಿದಾಗ ಇಬ್ಬರೂ ಉತ್ತರ ದೇಶದಿಂದ ಬಂದಿದ್ದರೂ ಮಂಟೇಸ್ವಾಮಿಯವರನ್ನು ಮೀರಿಸುವಷ್ಟು ಕೆಲಸ ಮಾಡಲು ಆಗಲಿಲ್ಲ.

ಈ ಒಂದು ಕಾವ್ಯದಲ್ಲಿ ಶ್ರೀಮಂತರ ಸಂಸ್ಕೃತಿಗೆ ವಿರುದ್ಧವಾಗಿ ಪ್ರತಿ ಸಂಸ್ಕೃತಿಯನ್ನ ಕಟ್ಟಿದ ಒಂದು ಉದ್ದೇಶವನ್ನೆ ಮಂಟೇಸ್ವಾಮಿ ಮತ್ತು ಮಾದೇಶ್ವರರು ಮಾಡುತ್ತಾರೆ.

ಮಂಟೇಸ್ವಾಮಿಯ ದಲಿತರ ಶೋಷಿತರ, ಬಡವರ ಬಲ್ಲಿದರ,ಅಲಕ್ಷಿತರ, ಅನಕ್ಷರಸ್ಥರ ಬದುಕಿಗೆ ಒಂದು ಆಶಾಕಿಣವಾಗಿ ಹೊರ ಹೊಮ್ಮಿದ್ದಾರೆ. ಮತ್ತು ಅವರು ಸ್ಫೂರ್ತಿಯ ನೆಲೆಯಾಗಿ ಆ ತಳವರ್ಗವನ್ನು ಮೇಲೆತ್ತುವ ಕೆಲಸವನ್ನೆ ಮಾಡಿರುವುದನ್ನ ನಾವು ಮನಗಾಣಬಹುದು.

ಹಾಗೆಯೆ ಎಲ್ಲಾ ಬಡವರಿಗೆ, ಅನಕ್ಷರಸ್ಥರಿಗೆ ಒಂದು ಸುಮದರ ಬದುಕನ್ನ ಕಟ್ಟಿಕೊಡುವ ಕೆಲಸವನ್ನ ಸಹ ಇವರು ಮಾಡಿದ್ದಾರೆ. ಮತ್ತು ಎಲ್ಲಾ ವರ್ಗದ ಬಡಜನರಿಗೆ ಸೂಕ್ತವಾದ ಸ್ಥಾನಮಾನವನ್ನ ಒದಗಿಸಿಕೊಡುವಲ್ಲಿ ಪ್ರಮುಖ ಪಾತ್ರವನ್ನ ವಹಿಸುತ್ತಾರೆ.

ಮಂಟೇಸ್ವಾಮಿಯ ಸಿದ್ದಪ್ಪಾಜಿಯನ್ನ ದತ್ತು ತೆಗೆದುಕೊಂಡು ಶಿಶು ಮಗನಾಗಿ ಪಡೆದುಕೊಂಡು ರೀತಿ ಒಂದು ರೀತಿಯ ಸೋಜಿಗವೇ ಸರಿ. ಏಕೆಂದರೆ ಶ್ರೀಮಂತರ ಮನೆಯಲ್ಲಿ ಹುಟ್ಟಿ ಆಳು ಕಾಳುಗಳನ್ನ ಕರೆದುಕೊಂಡು ಕೆಲಸ ಮಾಡಿಸುವಂತಹ ಒಬ್ಬ ಏಳು ವರ್ಷದ ಬಾಲಕನನ್ನು ದತ್ತು ತೆಗೆದುಕೊಳ್ಳುವ ಸಲುವಾಗಿ ಮತ್ತು ಶಿಷ್ಯನ್ನನ್ನಾಗಿ ಮಾಡಿಕೊಳ್ಳುವ ಸಲುವಾಗಿ ಅವನ ವಂಶವನ್ನೆ ನಿರ್ವಂಶ ಮಾಡುವ ಒಂದು ಗುರಿ ಮಂಟೇಸ್ವಾಮಿಯದಾಗಿರುತ್ತದೆ. ಅಂದರೆ ಅತಿ ಹೆಚ್ಚು ಐಶ್ವರ್ಯವನ್ನ ಕೊಟ್ಟು ಕೆಂಪಚಾರಿ ಎಂಬ ಮಗನು ಹುಟ್ಟಿದ ಮೇಲೆ ಐಶ್ವರ್ಯ ಬಂದಾಗ ಅವನ ಅಂದರೆ ತಂದೆ–ತಾಯಿಗಳ ಆಗರ್ಭ ಶ್ರೀಮಂತಕ್ಕೆ ಒಂದು ಎಲ್ಲೆ ಇಲ್ಲದಂತಾಗಿ ಅವರು ಯಾವುದೇ ದೇವರನ್ನ ಪೂಜಿಸದೆ ಬಹಳ ಅಹಂಕಾರಿಗಳಾಗಿ ಬಾಳುತ್ತಿರುವಾಗ ಇದನ್ನೆ ಮಂಟೇಸ್ವಾಮಿ ಸಹಿಸದೆ ಅವನ ಕುಟುಂಬವನ್ನ ನಾಶ ಮಾಡುವ ಒಂದು ಪ್ರಸಂಗ ಇಲ್ಲಿ ಒದಗಿ ಬರುತ್ತದೆ.

ಅಂದರೆ ಇಲ್ಲಿ ಬಡವರಾಗಿದ್ದ ಸಮಯದಲ್ಲಿ ಹೇಗೆ ಜೀವಿಸುತ್ತ ಇದ್ದರು. ಹೇಗೆ ದೇವರುಗಳಿಗೆ ಪೂಜಿಸುತ್ತಾ ಕಾಲ ಕಳೆಯುತ್ತಿದ್ದರು ಹಾಗೆಯೆ ಶ್ರೀಮತಂತಿಕೆ ಬಂದಾಗ ಎಲ್ಲವನ್ನ ಬಿಟ್ಟು ಅಹಂಕಾರಿಗಳಾವುದು ಮಂಟೇಸ್ವಾಮಿಗೆ ಆಗುವುದಿಲ್ಲ. ಅಂತಹ ವಿಚಾರಗಳನ್ನೆ ನಾವು ಈಗಲು ಸಹ ನೋಡಬಹುದಾಗಿದೆ ಮತ್ತು ಮಂಟೇಸ್ವಾಮಿಯ ರಾಚಪ್ಪಾಜಿಯನ್ನ ತನ್ನ ಶಿಷ್ಯನ್ನಾಗಿ ಪಡೆದುಕೊಂಡ ಮೇಲೆ ಅವನು ಹಲವಾರು ಪವಾಡಗಳನ್ನ ಗೆಲ್ಲುವ ಒಂದು ದೃಶ್ಯ ಅಮೋಘವಾಗಿದೆ. ಅಂದರೆ ಸಮುದ್ರದ ಮಧ್ಯ ಭಾಗಕ್ಕೆ ಹೋಗಿ ಕಾಲಿಗೆ ನೀರು ತಾಕದ ಹಾಗೆ ಹೋಗಿ ಶ್ರೀಮಂತರು ಮಾಡುವ ಸಾಮಾನುಗಳನ್ನು ಅವನ ಜೋಳಿಗೆಗೆ ಹಾಕಿಕೊಂಡು ಬರುವುದು ಒಂದು ಸದೃಶ್ಯವಾದ ಪವಾಡವೇ ಸರಿ. ಅಲ್ಲಿಯೂ ಸಹ ಶ್ರೀಮಂತರ ದಬ್ಬಾಳಿಕೆಯನ್ನು ಮುರಿಯುವ ಒಂದು ಪ್ರಯತ್ನವನ್ನು ನಾವು ಕಾಣುತ್ತೇವೆ. ಮಂಟೇಸ್ವಾಮಿ ಜನಪದ ಕಾವ್ಯದಲ್ಲಿ ನಾವು ಮಂಟೇಸ್ವಾಮಿಯ ಶಿಷ್ಯರನ್ನು ಪಡೆದು ಅವರಿಗೆ ತನ್ನದೇ ಆದ ಸಿದ್ಧಾಂತಗಳನ್ನು ತೋರಿಸಿಕೊಡುವ ಕೆಲಸವನ್ನು ಮಾಡುತ್ತಾನೆ.

ಇಲ್ಲಿ ಸಿದ್ದಪ್ಪಾಜಿಯು ಹಲವಾರು ಕಷ್ಟ ಕೋಟಲೆಗಳನ್ನು ಸಹಿಸಿಕೊಂಡು ಕುಂದೂರು ಬೆಟ್ಟದ ಗವಿಯೊಳಗೆ ಇದ್ದು ಅಲ್ಲಿ ಕಾಳಿಂಗ ಸರ್ಪದ ಮೇಲೆ ಮಲಗಿಕೊಂಡು ಸುಮಾರು ೭ ವರ್ಷಗಳ ಕಾಲ ಇರುತ್ತಾನೆ. ಇಲ್ಲಿಯೂ ಸಹ ಮಂಟೇಸ್ವಾಮಿಯು ಏನಾದರೂ ಮಾಡಿ ಸಿದ್ದಪ್ಪಾಜಿಯನ್ನು ಶಿಷ್ಯನನ್ನಾಗಿ ಪಡೆಯುವುದೇ ಇದರ ಉದ್ದೇಶವಾಗಿರುತ್ತದೆ.

ಹಾಗೆಯೇ ಸಿದ್ದಪ್ಪಾಜಿಯನ್ನು ಹಲಗೂರಿಗೆ ಕಬ್ಬಿಣದ ಭಿಕ್ಷೆಯನ್ನು ತೆಗೆದುಕೊಂಡು ಬರಲು ಕಳುಹಿಸುವಾಗ ಸಿದ್ದಪ್ಪಾಜಿಗೆ ತುಂಬಾ ದುಃಖವಾಗುತ್ತದೆ. ಏಕೆಂದರೆ ಅಲ್ಲಿನ ಹಲಗೂರಿನ ಏಳು ಜನ ಪಾಳೇಗಾರರು ಕಬ್ಬಿಣದ ಭಿಕ್ಷೆ ಕೊಡುವುದಿಲ್ಲ ಅಂತ ಗೊತ್ತಾದಾಗ ಸಿದ್ದಪ್ಪಾಜಿಯನ್ನ ಬಲವಂತವಾಗಿ ಕಳುಹಿಸಿ ಅಲ್ಲಿ ಪವಾಡಗಳನ್ನು ಮಾಡುವುದು ಮತ್ತು ಸಿದ್ದಪ್ಪಾಜಿಯಿಂದ ಪವಾಡಗಳನ್ನ ಮಾಡಿಸುವುದು ಮತ್ತು ಪಾಳೇಗಾರರು ಹಲವಾರು ಪವಾಡಗಳನ್ನು ಸಿದ್ದಪ್ಪಾಜಿಯಿಂದ ಮಾಡಿಸುತ್ತಾರೆ. ಆದರೆ ಮಂಟೇಸ್ವಾಮಿಯು ಸಿದ್ದಪ್ಪಾಜಿಯನ್ನು ಹರಸುತ್ತಾ ಹಾರೈಸಿ ಧೈರ್ಯ ತುಂಬಿ ಪವಾಡಗಳನ್ನು ಮಾಡಿಸುವುದು. ಮತ್ತು ಪವಾಡಗಳು ಎದುರಾದಾಗ ಸಿದ್ದಪ್ಪಾಜಿಯು ಮಂಟೇಸ್ವಾಮಿಯನ್ನುಮನದಲ್ಲೆ ನೆನೆಸಿಕೊಂಡು ಪವಾಡ ಮಾಡುವಾಗ ಮಂಟೇಸ್ವಾಮಿಯ ಪವಾಡಗಳಿಂದ ಗೆದ್ದು ಬರುತ್ತಾನೆ. ಇಂತಹ ಸನ್ನಿವೇಶಗಳನ್ನು ನಾವು ನೋಡಬಹುದಾಗಿದೆ. ರಾಜರು ಸಿದ್ದಪ್ಪಾಜಿಗೆ ಕೊಡುವಂತಹ ಕಷ್ಟಗಳು ಮಂಟೇಸ್ವಾಮಿಗೆ ಅರಿವು ಆದಾಗ ಮಂಟೇಸ್ವಾಮಿಯು ದೂರದೃಷ್ಠಿಯಿಂದ ನೋಡಿ ಅಲ್ಲಿಂದಲೆ ಭಂಗಿ ಸೇವನೆ ಮಾಡಿ, ತನ್ನ ವಿಭೂತಿಯನ್ನ ಅವರ ಮೇಲೆ ಹಾಕುವುದು ಇಲ್ಲಿ ಸಂಸ್ಕೃತಿಗೆ ಪ್ರತಿ ಸಂಸ್ಕೃತಿಯನ್ನು ಎತ್ತಿ ತೋರಿಸುತ್ತದೆ.

ಹಲಗೂರಿನಲ್ಲಿ ರಾಜರು ಸಿದ್ದಪ್ಪಾಜಿಗೆ ಹಲವಾರು ಪವಾಡಗಳನ್ನು ಏರ್ಪಾಟು ಮಾಡುತ್ತಾರೆ ಅವುಗಳೇನೆಂದರೆ ಕಳ್ಳಿ ಹಾಲು ಕುಡಿಸುವುದು, ಎಣ್ಣೆಯ ಕೊಪ್ಪರಿಕೆ ಒಳಗಡೆ ಕುಳ್ಳರಿಸುವುದು, ಈ ರೀತಿಯಾಗಿ ಹಲವಾರು ಸಂಶೋಧನೆಗಳನ್ನು ಹಲಗೂರಿನ ಪಾಳೇಗಾರರು ಮಾಡಿಸುತ್ತಾರೆ. ಆಗ ಸಿದ್ದಪ್ಪಾಜಿಯು ಮಂಟೇಸ್ವಾಮಿಯ ಪ್ರಭಾವದಿಂದ ಗೆದ್ದು ಬರುತ್ತೇನೆ.

ಅಂದರೆ ಪಾಳೇಗಾರರುಕಬ್ಬಿಣದ ಭಿಕ್ಷೆ ಕೊಡಲು ಏನೆಲ್ಲಾ ಕಷ್ಟಕೊಡುತ್ತಾರೆ ಮತ್ತು ಅವರಿಂದ ಎನೇನೊ ಕಷ್ಟಗಳು ಸಿದ್ದಪ್ಪಾಜಿಗೆ ಸಂಭವಿಸುತ್ತವೆ ಮತ್ತು ಅದನ್ನ ದೂರದೃಷ್ಟಿಯಿಂದ ನೋಡಿ ಮಂಟೇಸ್ವಾಮಿ ಹೇಗೆ ಪರಿಹರಿಸುತ್ತಾನೆ ಎಂಬುದುನ್ನು ನಾವು ಇಲ್ಲಿ ಗಮನ ಹರಿಸುವ ಬಹಳ ಮುಖ್ಯವಾದ ವಿಷಯವಾಗಿದೆ. ಹಾಗೆಯೆ ಅವರು ಕಬ್ಬಿಣದ ಭಿಕ್ಷೆ ಕೊಡದೆ ಇದ್ದಾಗ ಮಂಟೇಸ್ವಾಮಿಯು ಅವರಿಗೆ ಕಷ್ಟಗಳನ್ನು ಕೊಡತ್ತಾನೆ. ಮತ್ತು ಎಲ್ಲಾ ಸಂಪತ್ತನ್ನು ನಾಶ ಮಾಡಿ ಅವರನ್ನು ಸಹ ಇವರ ಶಿಷ್ಯರನ್ನಾಗಿ ಪಡೆದುಕೊಂಡು ಬೊಪ್ಪೇಗೌಡನ ಪುರಕ್ಕೆ ಬರುತ್ತಾನೆ.

ಮಂಟೇಸ್ವಾಮಿಯು ಇಲ್ಲಿಯೂ ಸಹ ಅಹಂಕಾರಿಗಳನ್ನು ಬಿಡುವುದಿಲ್ಲ. ಮತ್ತು ಏನಾದರೂ ಮಾಡಿ ಹಲಗೂರಿನ ಪಾಳೇಗಾರರಿಂದ ಕಬ್ಬಿಣದ ಭಿಕ್ಷೆಯನ್ನ ತೆಗೆದುಕೊಳ್ಳಬೇಕೆಂಬ ಹಠವನ್ನ ಮಂಟೇಸ್ವಾಮಿ ಹೊಂದಿರುತ್ತಾನೆ.

ಮಂಟೇಸ್ವಾಮಿ ಜನಪದೀಯ ಕಾವ್ಯದಲ್ಲಿ ಸಂಸ್ಕೃತಿಗೆ -- ಪ್ರತಿಸಂಸ್ಕೃತಿಯನ್ನ ಹೇಗೆ ಮಾಡುವುದು ಎಂಬುದನ್ನ ಮಂಟೇಸ್ವಾಮಿ ತೋರಿಸಿಕೊಟ್ಟಿದ್ದಾರೆ. ಇಂತಹ ವಿಷಯಗಳನ್ನು ನಾವು ಈ ಕಾವ್ಯದಿಂದ ನೋಡಿದ್ದೇವೆ.

ಮುಂದೆ ಮಂಟೇಸ್ವಾಮಿಯು ಸಿದ್ದಪ್ಪಾಜಿಯನ್ನ ಕೊಳ್ಳೇಗಾಲದ ಹತ್ತಿರ ವಿರುವ ಕುರುಬನ ಕಟ್ಟೆಗೆ ಕಳುಹಿಸಿ ಅಲ್ಲಿ ನೀನು ನೆಲೆಸುವಂತೆ ಹೇಳಿ ಅಲ್ಲಿಗೆ ಹಲಗೂರಿನ ಪಾಳೇಗಾರರನ್ನಕಳುಹಿಸಿಕೊಡುವುದು.

ರಾಚಪ್ಪಾಜಿಯನ್ನು ಮೈಸೂರು ತಾಲೋಕಿನ ಚಿಕ್ಕಲೂರಿಗೆ ಕಳುಹಿಸಿ ಅಲ್ಲಿ ಅವರನ್ನ ಅಲ್ಲಿ ನೆಲೆಸುವಂತೆ ಮಾಡುವುದು. ದೊಡ್ಡಮ್ಮ ತಾಯಿಯನ್ನ ಮಳವಳ್ಳಿ ತಾಲೋಕಿನ ಮುಟ್ಟನಹಳ್ಳಿ ತೋಪಿನಲ್ಲಿ ನೀನು ನೆಲೆಸು ಎಂದು ಹೇಳಿ ಅವರನ್ನು ಮೂರು ಸ್ಥಳಗಳಿಗೆ ಕಳುಹಿಸಿ ಮಂಟೇಸ್ವಾಮಿಯವರು ಮಳವಳ್ಳಿ ತಾಲೋಕಿನ ಬೊಪ್ಪೇಗೌಡನ ಪುರದಲ್ಲಿ ಕಲಿ ಪುರುಷ ಬರುವುದನ್ನು ತನ್ನ ದೈವ ಪ್ರಭಾವದಿಂದ ಕಂಡು ಅಲ್ಲಿ ಒಂದು ಬಾವಿಯನ್ನ ತೆಗೆಸಿ ಅದರೊಳಗೆ ಹೋಗಿ ಮಲಗಿಕೊಳ್ಳುತ್ತಾನೆ. ಇದನ್ನೆಲ್ಲಾ ನೋಡಿದಾಗ ಮಂಟೇಸ್ವಾಮಿಯ ಜನಪದೀಯ ಕಾವ್ಯವು ತುಂಬಾ ವಿಸ್ತೃತವಾಗಿದೆ ಎಂಬುದನ್ನು ನಾನು ಮನ ಗಾಣಬಹುದಾಗಿದೆ.

ಈ ಮಂಟೇಸ್ವಾಮಿಯ ಕಾವ್ಯವನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡಾಗ ಇದರಲ್ಲಿರುವ ವಿಷಯಗಳನ್ನು ಆಳವಾಗಿ ಅಧ್ಯಯನ ಮಾಡಿದಾಗ ಇದರಲ್ಲಿಕಂಡು ಬರುವ ಎಲ್ಲಾ ವಿಷಯಗಳನ್ನು ತಿಳಿದುಕೊಳ್ಳಲು ಸಹಕಾರಿಯಾಯಿತು. ಆದುದರಿಂದ ಮಂಟೇಸ್ವಾಮಿ ಕಾವ್ಯವು ಒಂದು ಬೃಹತ್ ಕಾವ್ಯವಾಗಿ ಹೊರ ಹೊಮ್ಮಿದೆ ಎಂಬುದನ್ನು ಮನಗಂಡಿದ್ದೇನೆ. ಪ್ರೊ. ಹಿ. ಚಿ. ಬೋರಲಿಂಗಯ್ಯನವರ ಬುಡಕಟ್ಟು ಮಂಟೇಸ್ವಾಮಿ ಕಾವ್ಯವನ್ನ ಆಳವಾಗಿ ಅಧ್ಯಯನ ಮಾಡಿದಾಗ ಅದರಲ್ಲಿರುವ ಉತ್ತಮ ಅಂಶಗಳನ್ನು ತಿಳಿದುಕೊಳ್ಳಲು ಸಾಧ್ಯವಾಯಿತು. ಹಾಗೆಯೆ ಅಲ್ಲಿನ ಮಂಟೇಸ್ವಾಮಿ ಮತ್ತು ಅವರ ಶಿಷ್ಯಂದಿರ ಪವಾಡಗಳನ್ನು ಆಳವಾಗಿ ಅರಿಯಲು ಈ ಮಂಟೇಸ್ವಾಮಿ ಕಾವ್ಯವು ತುಂಬಾ ಅನುಕೂಲವಾಯಿತು ಮಂಟೇಸ್ವಾಮಿ ಕಾವ್ಯವನ್ನ ಅಧ್ಯಯನಕ್ಕೆ ಒಳಪಡಿಸಿಕೊಂಡ ಮೇಲೆ ಅಲ್ಲಿ ಅಡಗಿರುವ ಆಳವಾದ ವಿಷಯಗಳನ್ನು ಓದಿ ತಿಳಿದುಕೊಂಡು ಸಂಶೋದನೆಯನ್ನ ಮಾಡಲು ಈ ಕಾವ್ಯವು ನನಗೆ ಬಹಳ ಸಹಕಾರಿಯಾಯಿತು.

ಈ ಕಾವ್ಯದಿಂದ ನನ್ನ ಜ್ಞಾನದ ಮಟ್ಟವು ಉತ್ತಮ ಸ್ಥಿತಿಗೆ ಬರಲು ಕಾರಣವಾಯಿತು ಮತ್ತು ಸಂಶೋದನೆ ಮಾಡಲು ಸಹಕಾರಿಯಾಯಿತು. ಮುಂದೇ ಮಂಟೇಸ್ವಾಮಿ ಕಾವ್ಯವನ್ನ ಅಧ್ಯಯನ/ಸಂಶೋಧನೆ ಒಳಪಡಿಸಿಕೊಳ್ಳುವವರು ಇನ್ನೂ ಉತ್ತುಮವಾಗಿ ಅಧ್ಯಯನ ಮಾಡಿ ಅದರಲ್ಲಿ ಬರುವ ಹಲವಾರು ಉತ್ತಮ ಅಂಶಗಳನ್ನು ಮಂಟೇಸ್ವಾಮಿ ಕಾವ್ಯವನ್ನ ಇನ್ನೂ ವಿಸ್ತಾರ ಮಾಡಬಹುದಾಗಿದೆ.

## ಆಕರ ಗ್ರಂಥ

ಮಂಟೇಸ್ವಾಮಿ ಕಾವ್ಯ – ಸಂಪಾದಕರು ಪ್ರೊ. ಹಿ.ಚಿ. ಬೋರಲಿಂಗಯ್ಯ
ಮುದ್ರಣ ವರ್ಷ – ೧೯೯೮

## ಪರಾಮರ್ಶನ ಗ್ರಂಥಗಳು

೧. ಬುಡಕಟ್ಟು ಮಹಾಕಾವ್ಯ ಮಾಲೆ – ಪ್ರೊ. ಹಿ. ಚಿ. ಬೋರಲಿಂಗಯ್ಯ
ಮುದ್ರಣ ವರ್ಷ – ೧೯೯೩

೨. ಮಂಟೇಸ್ವಾಮಿ ಕಾವ್ಯ – ಡಾ. ಚಂದ್ರುಕಾಳೇನಹಳ್ಳಿ
ಮುದ್ರಣ ವರ್ಷ – ೨೦೧೧

೩. ಮಂಟೇಸ್ವಾಮಿ ಮೂಮೆಂಟ್ – ಮಹಾದೇವ ಶಂಕನ ಪುರ
ಮುದ್ರಣ ವರ್ಷ – ೨೦೦೨

೪. ಕಾವ್ಯ ಕಥನ – ಡಾ. ಪಿ. ಮಣಿ
ಮುದ್ರಣ ವರ್ಷ – ೨೦೦೯

೫. ಕನ್ನಡ ಸಂಶೋಧನೆ – ಡಾ. ರೆಹಮತ್ ತರಿಕೆರೆ,

